# ಶ್ರೀ ಹರಿದಾಸ ಸಾಹಿತ್ಯದಲ್ಲಿ ಶ್ರೀಮದ್ಬ್ರಹ್ಮಸೂತ್ರಭಾಷ್ಯದ ಪ್ರಮೇಯಗಳು








॥ ಶ್ರೀ ಗೋಪೀನಾಥೋವಿಜಯತೇ ॥

# ಶ್ರೀ ಹರಿದಾಸ ಸಾಹಿತ್ಯದಲ್ಲಿ
# ಶ್ರೀಮದ್ಬ್ರಹ್ಮಸೂತ್ರಭಾಷ್ಯದ ಪ್ರಮೇಯಗಳು

[ಸಕಲ ಶ್ರುತಿ ಸಮ್ಮತವಾದ ಮೋಕ್ಷಾಪೇಕ್ಷಿಗಳಿಗಿರುವ ಏಕೈಕ ದಾರಿದೀಪ
ಶ್ರೀಮನ್ ಮಧ್ವಸಿದ್ಧಾಂತ ಎಂದು ಆಸ್ತಿಕರನ್ನು ಎಚ್ಚರ
ಗೊಳಿಸುವ ಶ್ರೀ ಹರಿದಾಸ ಸಾಹಿತ್ಯಾಮೃತಗ್ರಂಥ]

ಲೇಖಕರು :
**ಚಿಂಚೋಳಿ ಪ್ರಹ್ಲಾದಾಚಾರ್ಯ**

ಪ್ರಕಾಶಕರು
ಶ್ರೀ ಶ್ರೀಪಾದರಾಜಮಠ
ಮುಳಬಾಗಿಲು

॥ಶ್ರೀ ಶ್ರೀ ಗೋಪೀನಾಥೋ ವಿಜಯತೇ॥

## "ಶ್ರೀಹರಿದಾಸ ಸಾಹಿತ್ಯದಲ್ಲಿ ಬ್ರಹ್ಮಸೂತ್ರಭಾಷ್ಯ"

ಶ್ರೀಮತ್ಪರಮ ಹಂಸ ಪರಿವ್ರಾಜಕಾಚಾರ್ಯೇತ್ಯಾದ್ಯನೇಕಗುಣಸಂಪನ್ನ ಪದವಾಕ್ಯ ಪ್ರಮಾಣ ಪಾರಾವಾರ ಪಾರೀಣ ಸರ್ವತಂತ್ರ ಸ್ವತಂತ್ರ ಶ್ರೀಮದ್ವೈಷ್ಣವಸಿದ್ಧಾಂತ ಪ್ರತಿಷ್ಠಾಪನಾಚಾರ್ಯ ಶ್ರೀಮಧ್ವಾಚಾರ್ಯರ ಪ್ರಥಮ ಶಿಷ್ಯ ಪರಂಪರಾ ಶ್ರೀ ಶ್ರೀ ಪದ್ಮನಾಭ ತೀರ್ಥ ವೇದಾಂತ ಮೂಲ ಮಹಾ ಸಂಸ್ಥಾನ ಶ್ರೀಹಯವದನ ರಂಗವಿಠಲಾತ್ಮಕ ಶ್ರೀಗೋಪೀನಾಥದಿವ್ಯಪಾದಪದ್ಮಾರಾಧಕರಾದ ಶ್ರೀ ಶ್ರೀಪಾದರಾಜ ವರವಿದ್ಯಾಸಿಂಹಾಸನಾಧೀಶ್ವರ ಶ್ರೀ 108 ಶ್ರೀ ಸತ್ಯನಿಧಿತೀರ್ಥಶ್ರೀಪಾದಂಗಳವರ ವರಕುಮಾರರಾದ ಶ್ರೀ ಶ್ರೀ ವಿಜಯನಿಧಿತೀರ್ಥ ಶ್ರೀಪಾದಂಗಳವರ ಕರಕಮಲ ಸಂಜಾತರಾದ

## ಶ್ರೀ 108 ಶ್ರೀ ವಿಜ್ಞಾನನಿಧಿತೀರ್ಥ ಶ್ರೀಪಾದಂಗಳವರ ಅನುಗ್ರಹ ಸಂದೇಶ.

ಅಪೌರುಷೇಯ-ಸಕಲವೇದಗಳ ಸಾರರೂಪವಾದ ಶ್ರೀ ವೇದವ್ಯಾಸರಿಂದ ರಚಿತವಾದ ಬ್ರಹ್ಮಸೂತ್ರಗಳಿಗೆ ಅನೇಕ [ಮತಾಚಾರ್ಯರುಗಳ] ಭಾಷ್ಯಗಳು ರಚಿತವಾಗಿರುವುದು ಸರಿಯಷ್ಟೆ. ಆ ಎಲ್ಲ ಭಾಷ್ಯಗಳೂ ಸೂತ್ರಕಾರರ ನಿಜ ಅಭಿಪ್ರಾಯಾನುಸಾರವಾಗಿಲ್ಲವೆಂತಲೂ ಮತ್ತು ಅವುಗಳ ಪರಮಪುರುಷಾರ್ಥಕ್ಕೇ ಸಾಧ್ಯವಲ್ಲವೆಂದೂ ದೇವತೆಗಳಿಂದ ಪ್ರಾರ್ಥಿಸಲ್ಪಟ್ಟ ಶ್ರೀ ವಾಯುದೇವರು ಈ ಕಲಿಯುಗದಲ್ಲಿ ಸಜ್ಜನರುಗಳನ್ನು ಸಂಸಾರ ದುಃಖದಿಂದ ಮುಕ್ತಿಗೊಳಿಸುವಂತ ನಿತ್ಯ ಸತ್ಯ ಹಾಗೂ ಶ್ರೀ ವೇದವ್ಯಾಸರಿಗೆ ಸಮ್ಮತವಾದ ಅಭಿಪ್ರಾಯರೀತ್ಯ ಭಾಷ್ಯವನ್ನು ರಚನೆ ಮಾಡಲು ಶ್ರೀಮಧ್ವರಾಗಿ ಅವತರಿಸಿ–ಬ್ರಹ್ಮಸೂತ್ರಭಾಷ್ಯ ರಚಿಸಿದರು. ಆದರೆ ಕಾಲನ ವಶಕ್ಕೆ ತುತ್ತಾಗಿ-ಜನಸಾಮಾನ್ಯರು ಅಜ್ಞಾನದಿಂದ ನಿಜತತ್ವವನ್ನು ತಿಳಿಯಲು ಸಂಸ್ಕೃತ ಭಾಷಾ ಮಾಧ್ಯಮವು ಮಂದ ಗತಿಯನ್ನು ಹೊಂದಿದ್ದರಿಂದ ಬ್ರಹ್ಮ ಸೂತ್ರ ಭಾಷ್ಯಗಳ ನೈಜ ತತ್ವಗಳ ಸ್ವರೂಪಾರ್ಥವನ್ನು ಸುಲಭ ಕನ್ನಡ ಮಾಧ್ಯಮದಿಂದ ಅಪರೋಕ್ಷ ಜ್ಞಾನಿಗಳಾದ ಶ್ರೀ ನರಹರಿತೀರ್ಥರು. ಶ್ರೀ ಶ್ರೀಪಾದರಾಜರು, ಶ್ರೀ ವ್ಯಾಸರಾಯರು, ಶ್ರೀ ವಾದಿರಾಜರು ಶ್ರೀ ಪುರಂದರದಾಸರು ಇತ್ಯಾದಿ ಜ್ಞಾನಿವರೇಣ್ಯರು [ಉಭಯ ಭಾಷೆಯಲ್ಲಿ ಪಂಡಿತ್ಯ ಹೊಂದಿದವರು] ಬ್ರಹ್ಮಸೂತ್ರಕ್ಕನುಗುಣವಾಗಿಯೇ ಹರಿದಾಸಸಾಹಿತ್ಯ ಪರಂಪರೆಯನ್ನು ಸಜ್ಜನರಉದ್ಧಾರಕ್ಕಾಗಿ ಬೆಳೆಸಿ ಪೋಷಿಸುತ್ತಿದ್ದ ಈ ದಾಸಸಾಹಿತ್ಯವು ಕ್ರಮೇಣ ಕುಂಠಿತವಾಗ ತೊಡಗಿರುವುದಕ್ಕೆ ನಾನಾ ಕಾರಣಗಳು ಇದೆಯಾದರೂ ಮುಖ್ಯವಾಗಿ ದಾಸ ಸಾಹಿತ್ಯ ಪ್ರಚಾರ ಕಾರ್ಯವು ಬಹಳಷ್ಟು ಹಿಂದುಳಿದಿದೆ. ಈ ದೆಸೆಯಲ್ಲಿ ದಾಸಸಾಹಿತ್ಯದ ವೈಶಿಷ್ಟ್ಯವನ್ನು ತಿಳಿಸುವಂಥ ಗ್ರಂಥದ ಅವಶ್ಯಕತೆಯಿದ್ದುದರಿಂದ [ಶ್ರೀಮಠದವತಿಯಿಂದ ನಮಗೆ ಪರಮ ಪ್ರಿಯರು ಹಾಗೂ ವ್ಯಾಸದಾಸ ಸಾಹಿತ್ಯದಲ್ಲಿ ವಿಶೇಷ ವ್ಯಾಸಂಗ ಮಾಡಿ "ದಾಸಸಾಹಿತ್ಯರತ್ನ" ಹರಿದಾಸ ಸಾಹಿತ್ಯ ಮಣಿ" "ಭಾಗವತ ಭೂ- ಇತ್ಯಾದಿ ಬಿರುದಾಂಕಿತ "ಶ್ರೀಬೆಂಚೋಳಿ ಪ್ರಹ್ಲಾದಾಚಾರ್ಯರು" ಈಗಾಗಲೇ ಅನೇಕ ಚಿಕ್ಕಪುಟ್ಟ ಗ್ರಂಥಗಳನ್ನು ರಚಿಸಿರುವ ಇವರು. "ದಾಸಸಾಹಿತ್ಯಆದ್ಯ ಪ್ರವರ್ತಕರಾದ" ಶ್ರೀ ಶ್ರೀಪಾದರಾಜರ ಉಕ್ತಿಯಂತೆ ಕಲಿಯುಗದಲ್ಲಿ "ಗಾಯನದಿ" ಕೇಶವ ಎಂದೊಡೆ

ಕೈಕೊಟ್ಟು ಸಲಹುವನು ರಂಗವಿಠಲ – ಎಂಬ ಮೂಲ ಮಂತ್ರದ ಆಧಾರದ ಮೇಲೆ ಆಳವಾದ ಅಧ್ಯಯನದಿಂದಾಗಿ – ನಮಗೆ ತಿಳಿದಂತೆ **"ಹರಿದಾಸಸಾಹಿತ್ಯದಲ್ಲಿ– ಬ್ರಹ್ಮಸೂತ್ರ ಭಾಷ್ಯದ ಪ್ರಮೇಯಗಳು"** ಎಂಬ ಗ್ರಂಥವು ಮೊದಲನೆಯದಾಗಿ ಸಜ್ಜನರ ಕೈಸೇರಲು ಅನುಕೂಲ ಪಡಿಸಿಕೊಟ್ಟಿರುತ್ತಾರೆ, ಈಗ್ರಂಥಕರ್ತರ ಇಚ್ಛೆಯಂತೆ ಇದೇ ಶುಕ್ಲನಾಮಸಂವತ್ಸರ ಆಶ್ವೀಜಮಾಸದ ಶುಕ್ಲಪಕ್ಷದ ವಿಜಯದಶಮಿಯಂದು ಶ್ರೀಬದರಿನಾರಾಯಣ ದೇವರ ಸನ್ನಿಧಿಯಲ್ಲಿ ಬಿಡುಗಡೆ ಮಾಡಿದೆವು. ನಮ್ಮ ಗುರುಗಳ ಅನುಗ್ರಹಕ್ಕೆ ಪಾತ್ರರಾದ ಈ ಗ್ರಂಥಕರ್ತರ ಈ ಗ್ರಂಥವನ್ನು ಬಹುಕಾಲದಿಂದಲೂ ಹರಿದಾಸ ಸಾಹಿತ್ಯ ದೀಕ್ಷಾಕಾಂಕ್ಷಿಗಳಾದ ಇವರು ಅನೇಕ ವರುಷಗಳ ಸತತ ಪ್ರಯತ್ನ ಹಾಗೂ ಅಧ್ಯಯನಾದಿಗಳಿಂದ ಹರಿದಾಸ ಸಾಹಿತ್ಯವೂ ಸಹ ಬ್ರಹ್ಮಸೂತ್ರ ಭಾಷ್ಯಕ್ಕನುಗುಣವಾಗಿಯೇ ಇದೆ ಎಂದು ಸಮರ್ಥಿಸುವಂತ ಈ ಪವಿತ್ರ ಕನ್ನಡ ಗ್ರಂಥವು ಸಜ್ಜನರ ಕೈ ಸೇರಿ ಗ್ರಂಥಕರ್ತರ ಮಹತ್ಸಾಧನೆಯು ಸಾರ್ಥಕವಾಗಲೆಂದು ನಮ್ಮ ಆರಾಧ್ಯಮೂರ್ತಿ ಶ್ರೀ ಶ್ರೀ ಹಯವದನ ರಂಗವಿಠಲಾತ್ಮಕ ಶ್ರೀ ಶ್ರೀ ಗೋಪೀನಾಥ ದೇವರಲ್ಲಿ ಪ್ರಾರ್ಥಿಸುತ್ತಾ ಇವರಿಗೂ ಇವರ ಕುಟುಂಬವರ್ಗದವರಿಗೂ ಇತೋಪ್ಯಧಿಕಯ ಸನ್ಮಂಗಳಗಳಾಗಲೆಂತ ಮಾಡುವ ನಾರಾಯಣ ಸ್ಮರಣೆಗಳು.

ಇತ್ಯನೇಕ ನಾರಾಯಣ ಸ್ಮರಣೆಗಳು

**ಶ್ರೀ ಶ್ರೀ ವಿಜ್ಞಾನನಿಧಿತೀರ್ಥ ಶ್ರೀಪಾದಂಗವಳರು**

## -: ಕೃತಜ್ಞತೆಗಳು :-

ಎಲ್ಲಾ ಪೀಠಾಧಿಪತಿಗಳೂ ಶ್ರೀ ಶ್ರೀಮದಾಚಾರ್ಯರ ಸತ್ಸಿದ್ಧಾಂತ ಪ್ರಚಾರ ಕಾರ್ಯದಲ್ಲಿ ನಿರತರಾಗಿ ಟೀಕಾ, ಟಿಪ್ಪಣಿಗಳಿಂದ ಕೂಡಿದ ಸರ್ವಮೂಲ ಗ್ರಂಥದ ಸತತ ಅಧ್ಯಯನ. ಪಾಠ ಪ್ರವಚನಾದಿ ಕಾರ್ಯದಲ್ಲಿ ನಿರತರಾಗಿ ಶ್ರಮಿಸುತ್ತಿರುವುದ ಅತ್ಯಂತ ಸಕ್ರಮ ಹಾಗೂ ಶ್ಲಾಘನೀಯ. ಆದರೆ ಪ್ರಕೃತಕಾಲಕ್ಕೆ ಅನ್ನಗತರಾದ, ಅಲ್ಪಾಯುಷಿಗಳಾದ ಯೋಗ್ಯಜೀವಿಗಳ ಹಾಗೂ ಸ್ತ್ರೀ ಸಮುದಾಯದ ಮೇಲೆ ಮರುಕ ತಾಳಿ ಶ್ರೀಮದಾಚಾರ್ಯರ ಸರ್ವಮೂಲ ಗ್ರಂಥಗಳಿಗೂ. ಶ್ರೀ ಟೀಕಾ-ಚಾರ್ಯರ ಟೀಕಾ ಗ್ರಂಥಗಳಿಗೂ ಹಾಗೂ ಶ್ರೀ ವ್ಯಾಸರಾಯರು, ಶ್ರೀ ರಾಘ-ವೇಂದ್ರರು, ಶ್ರೀ ವಾದಿರಾಜರು, ಶ್ರೀ ರಘೋತ್ತಮರು. ಇತ್ಯಾದಿ ಮಹಾನುಭಾವರ ಟಿಪ್ಪಣಿ ಗ್ರಂಥಗಳಿಗೂ ಕೇವಲ ಭಾಷಾಂತರರೂಪವಾದ ಅನೇಕ ಯತಿಗಳೂ ಹಾಗೂ ದಾಸ ಚತುಷ್ಟಯಾದಿಗಳಿಂದ ರಚಿತವಾದ ಪದ, ಪದ್ಯ, ಸುಳಾದಿ. ಉಗಾಭೋಗಗಳು ಶ್ರೀ ಶ್ರೀಪಾದರಾಜ ಯತಿಸಾರ್ವಭೌಮರ ಕಾಲದಿಂದ ವಿಶೇಷವಾಗಿ ಪ್ರಕಟವಾದದ್ದು ಅತ್ಯಂತ ಗಮನಾರ್ಹವಾದಾಗ್ಯೂ ಇದಕ್ಕೆ ಅಷ್ಟಾಗಿ ಪುರಸ್ಕಾರ ದೊರೆಯದ ಶೋಚನೀಯಾವಸ್ಥೆಯ ಈ ಕಾಲದಲ್ಲಿ ಅದೇ ಶ್ರೀ ಶ್ರೀಪಾದರಾಜ ಮಠದ ಪ್ರಕೃತ ಶ್ರೀಪಾದಂಗಳವರಾದ **ಶ್ರೀ ಶ್ರೀ ವಿಜ್ಞಾನನಿಧಿ ತೀರ್ಥ** ಶ್ರೀಪಾದಂಗಳವರು ತಮ್ಮ ಇಡೀ ಜೀವನವನ್ನೇ ವಿಶೇಷವಾಗಿ ಈ ಹರಿದಾಸ ಸಾಹಿತ್ಯ ಪ್ರಚಾರ ಕಾರ್ಯ ಮುಖಾಂತರ ಆಸ್ತಿಕ ಜನ ಸಮೂಹವನ್ನು ಆಧ್ಯಾತ್ಮ ಪ್ರಪಂಚಕ್ಕೆ ಎಳೆದೊಯ್ಯುವ ಪಣ ತೊಟ್ಟಿರುವುದು ಅತ್ಯಂತ ಸಂತೋಷ ಸಂಗತಿ.

ಪ್ರಕೃತ ಹರಿದಾಸ ಸಾಹಿತ್ಯವು ಶ್ರೀ ವೇದವ್ಯಾಸ ಪ್ರಣೀತವಾದ ಬ್ರಹ್ಮ-ಮೀಮಾಂಸ ಶಾಸ್ತ್ರದ ಕೇವಲ ಭಾಷಾಂತರನೇ ಹೊರತು ಸ್ವತಂತ್ರ ಗ್ರಂಥವಲ್ಲ ಎಂಬ ಆಧಾರದ ಮೇಲೆ ಬರೆಯಲ್ಪಟ್ಟ ಈ ಪವಿತ್ರ ಗ್ರಂಥ ಬಿಡುಗಡೆಗೆ ಸರ್ವವಿಧದಲ್ಲೂ ಅನುಗ್ರಹಿಸುತ್ತಿರುವುದಕ್ಕೆ ನಾನು ಅತ್ಯಂತ ಕೃತಜ್ಞತೆಗಳನ್ನು ಪೂಜ್ಯ ಶ್ರಿ ಶ್ರೀ ವಿಜ್ಞಾನ ನಿಧಿ ತೀರ್ಥ ಶ್ರಿಪಾದಂಗಳವರಿಗೆ ವಿನಯ, ಭಕ್ತಿಯಿಂದ ಅರ್ಪಿಸುತ್ತಲಿದ್ದೇನೆ. ನಾನು ಹಿಂದೆ ಬರದಿದ್ದ "ಶ್ರೀ ವ್ಯಾಸ ತೀರ್ಥ"ರೆಂಬ ಭ್ರಪದ್ ಗ್ರಂಥಕ್ಕೆ ತಮ್ಮ ಗುರುಗಳಾ-ಗಿದ್ದ ಶ್ರೀ ಶ್ರೀ ವಿಜಯಸಿಧಿತೀರ್ಥರಿಂದ ಮುನ್ನುಡಿ ಬರೆಸಿಕೊಟ್ಟು ಉಪಕರಿಸಿದ್ದರು. ಸಾಲದುದಕ್ಕೆ ಈ ನನ್ನ ಗ್ರಂಥವನ್ನು ತಮ್ಮ ಘಸತ್ರ ಬದರಿಯಾತ್ರಾ ವೇಳೆಯಲ್ಲಿ ಶ್ರೀ ಬದರಿನಾಥ ದೇವರ ದಿವ್ಯಸನ್ನಿಧಿಯಲ್ಲೇ ಬಿಡುಗಡೆ ಮಾಡಿದ್ದು ಮರೆಯಲಾಗದ ಸಂಗತಿಯಾಗಿದೆ. ಈ ಮಹಾನುಭಾವರಿಂದ ಶ್ರೀಮದಾಚಾರ್ಯರ ಸತ್ಸಿದ್ಧಾಂತ ಎಲ್ಲಾ ರೀತಿ ಪ್ರಚಾರ ಆಗುವುದರಲ್ಲಿ ಏನೇನೂ ಸಂದೇಹವಿಲ್ಲ. ಹರಿದಾಸನಾದ ನನ್ನ ಅನಂತ ಭಕ್ತಿ ಪ್ರಣಾಮಗಳನ್ನು ಶ್ರೀ ಶ್ರೀಗಳಿಗೆ ಅರ್ಪಿಸುತ್ತಲಿದ್ದೇನೆ.

-ಚಿಂಚೋಳಿ ಪ್ರಹ್ಲಾದಾಚಾರ್ಯ

ಶ್ರೀ ಅಕ್ಷೋಭ್ಯ ತೀರ್ಥರಿಂದ ಪ್ರತಿಷ್ಠಿತ, ಪದ್ಮನಾಭತೀರ್ಥರಿಂದ ಪೂಜಿತ
ಯೋಗಾನೃಸಿಂಹ ದೇವರು ಮುಳಬಾಗಿಲು



ಉಗ್ರಂ ವೀರಂ ಮಹಾವಿಷ್ಣುಂ ಜ್ವಲಂತಂ ಸರ್ವತೋಮುಖಂ
ನೃಸಿಂಹಂ ಭೀಷಣಂ ಭದ್ರಂ ಮೃತ್ಯುಮೃತ್ಯುಂ ನಮಾಮ್ಯಹಂ

## ಶ್ರೀ ಶ್ರೀಮದಾನಂದತೀರ್ಥರು



ಅಭ್ರಮಂ ಭಂಗರಹಿತಂ ಅಜಡಂ ವಿಮಲಂ ಸದಾ ।
ಆನಂದತೀರ್ಥಮತುಲಂ ಭಜೇ ತಾಪತ್ರಯಾಪಹಂ ॥

ಶ್ರೀ ಪದ್ಮನಾಭತೀರ್ಥರ ಮೂಲಬೃಂದಾವನ ಆನೆಗೊಂದಿ



ರಮಾನಿವಾಸೋಽಪಿ ವಾಸಭೂಮಿಃ । ಸನ್ನ್ಯಾಯರತ್ನಾವಲಿಜನ್ಮಭೂಮಿಃ ॥
ವೈರಾಗ್ಯಭಾಗ್ಯೋ ಮಮ ಪದ್ಮನಾಭ- । ತೀರ್ಥಾಮೃತಾಬ್ಧಿರ್ಭವತಾದ್ವಿಭೂತ್ಯೈ ॥

ಜಗದ್ಗುರು ಶ್ರೀ ಮಧ್ವಾಚಾರ್ಯರ ಪ್ರಥಮಶಿಷ್ಯರಾದ
ಶ್ರೀ ಪದ್ಮನಾಭತೀರ್ಥರ ಮೂಲಪರಂಪರಾಮಠದ
ಶ್ರೀ ಶ್ರೀಪಾದರಾಜಮಠಾಧೀಶರಾದ
ಶ್ರೀ ವಿಜ್ಞಾನನಿಧಿತೀರ್ಥರಿಂದ ಶ್ರೀ ಮಧ್ವಾಚಾರ್ಯರ ಕರಾರ್ಚಿತ
ಶ್ರೀ ಗೋಪೀನಾಥ ದೇವರ ಪೂಜೆ

## ಶ್ರೀ ಶ್ರೀಪಾದರಾಜರ ಮೂಲಬೃಂದಾವನ ಮುಳಬಾಗಿಲು



ತಂ ವಂದೇ ನರಸಿಂಹತೀರ್ಥನಿಲಯಂ । ಶ್ರೀ ವ್ಯಾಸರಾಟ್ ಪೂಜಿತಂ ।
ಧ್ಯಾಯಂತಂ ಮನಸಾ ನೃಸಿಂಹ ಚರಣಂ ಶ್ರೀಪಾದರಾಜಂ ಗುರುಂ ॥

ಶ್ರೀ ಶ್ರೀಪಾದರಾಜ ಮಠಾಧೀಶರಾದ

ಶ್ರೀವಿಜ್ಞಾನನಿಧಿತೀರ್ಥ ಶ್ರೀಪಾದಂಗಳವರು



# ಶ್ರೀ ವಿಜಯವಿಠಲ ಪ್ರಸೀದ

## ಶ್ರೀ ಹರಿದಾಸ ಸಾಹಿತ್ಯದಲ್ಲಿ ಶ್ರೀಮತ್ ಬ್ರಹ್ಮಸೂತ್ರಭಾಷ್ಯ

**ಮೊದಲ ತೊದಲ ನುಡಿ :-**

ನಾನೊಬ್ಬ ಹರಿದಾಸ ಸಾಹಿತಿ. ಕಳೆದ 50 ವರ್ಷಗಳಿಗೂ ಮೀರಿ ಸಾವಿರಾರು ಪದ, ಪದ್ಯ, ಸುಳಾದಿ, ಉಗಾಭೋಗಗಳನ್ನು ಸಾಂಪ್ರದಾಯಕವಾಗಿ ಅಭ್ಯಾಸ ಮಾಡಿ ದಾಸಸಾಹಿತ್ಯ ಪ್ರಚಾರ ಕಾರ್ಯೋನ್ಮುಖನಾಗಿ ಇಡೀ ಭರತ ಖಂಡ ಪೂರ್ತಾ ಬಹು ಭಾಗ ಕಾಲುನಡಿಗೆಯಲ್ಲೇ ಆ ಸೇತು ಬದರಿಕಾಶ್ರಮ ಪೂರ್ತಾ ಸಂಚರಿಸಿ ಅಲ್ಲಲ್ಲಿ ಭಜನ, ಪ್ರವಚನಾದಿಗಳನ್ನು ಮಾಡಿದಾಗ, ಬಹುಜನರ ಮೇಲೆ ಪರಿಣಾಮಕಾರಿಯಾಗಿ ಅವರೆಲ್ಲರೂ ಜ್ಞಾನಾರ್ಜನೆಗೆ ತವಕಿಸಿದರು. ಇದಕ್ಕಾಗಿ ನಾನು 300ಕ್ಕೂ ಮೀರಿ ಧಾರ್ಮಿಕ ಲೇಖನಗಳನ್ನು ಬರೆದೆ. ಈ ಜ್ಞಾನ ಕಾರ್ಯದಲ್ಲಿ ಯಶಸ್ಸು ಕೊಟ್ಟು ಅನುಗ್ರಹಿಸಲು, ಕಲಿಯುಗ ಕಾಮಧೇನು ಕಲ್ಪವೃಕ್ಷರಾದ ಶ್ರೀರಾಘವೇಂದ್ರ ಗುರುರಾಜರನ್ನು 190 ಮಂತ್ರಾಲಯ ಯಾತ್ರೆ ಮಾಡಿ, ಯೋಚಿಸಿದೆ. ಅಂತೆಯೇ ಶ್ರೀ ವಿಜಯದಾಸಾರ್ಯರನ್ನೂ ಮೊರೆಹೊಕ್ಕೆ. ಶಾಸ್ತ್ರಾಧ್ಯಯನವನ್ನೂ, ಸಾಂಪ್ರದಾಯಕ ಗುರುಕುಲವಾಸಾದಿ ಮಾಡದಿದ್ದಲ್ಲಿ ಹಾಗೂ ವೇದಾಧ್ಯಯನಾದಿ ಮಾಡದಿದ್ದಲ್ಲಿ ನೈಜ ಸಿದ್ಧಾಂತಜ್ಞಾನ ಹುಟ್ಟದು. ಈ ವೇದ ಅಧ್ಯಯನ ಅಧಿಕಾರ ಕೇವಲ ಕೆಲವು ಜನಾಂಗದ ಪುರುಷರಿಗೆ ಮಾತ್ರಾ ಸೀಮಿತವಾದದ್ದು ಎಂಬ ಸಂಕೋಲೆ ಬೇರೆ. ಮೋಕ್ಷಾಪೇಕ್ಷಿಗಳಾದ ಸ್ತ್ರೀ ಶೂದ್ರ, ಬ್ರಹ್ಮ ಬಂಧುಗಳಿಗೆ ದುರ್ಲಭವಾಗಿ ಲಭಿಸಿದ ಈ ಮಾನವ ಜನ್ಮವೂ ನಿಷ್ಪ್ರಯೋಜನಕಾರಿಯಾಗುವ ಪರಿಸ್ಥಿತಿ ಒದಗಿ ಕಷ್ಟ ಪರಿಸ್ಥಿತಿ ಒದಗಿದ ಕಾಲದಲ್ಲಿ ಅಪರೋಕ್ಷಜ್ಞಾನಿಗಳಾದ ಹರಿದಾಸರುಗಳ ಪದ ಪದ್ಯ ಸುಳಾದಿಗಳನ್ನು ಅಭ್ಯಾಸಮಾಡಿಸೋಣ ಎಂದರೆ ಕೆಲವು ಪಂಡಿತಮಾನಿಗಳು ಅಡ್ಡಿ ಬರುತ್ತಾ ಈ ಕನ್ನಡ ದೇವರನಾಮಗಳು ಕೇವಲ ಮನೋರಂಜನೆಗೇ ಹೊರತು ಮೋಕ್ಷಲಭಿಸಲು ಸಹಕಾರಿಯಲ್ಲ ಎಂದು ಕಠಿಣ ಬೆದರಿಕೆ ಹಾಕುತ್ತಲಿರುವುದು ಎಲ್ಲರಿಗೂ ತಿಳಿದ ವಿಚಾರವೇ ಆಗಿದೆ. ಇಂತಹ ಸಂದಿಗ್ಧ ಪರಿಸ್ಥಿತಿಯಲ್ಲಿ ಆದುನಿಕ ಆಸ್ತಿಕನ ಗತಿಏನು ? ಈಗ ವೇದಾಧ್ಯಯನ ಮಾಡಲಾಗುವುದೇ ? ಗುರುಕುಲಗಳು ಹಾಗೂ ಹಿಂದಿನ ಯುಗದ ತರಹದ ಗುರುಗಳು ಈಗ ಎಲ್ಲಿ ಲಭಿಸಾರು ? ಕೇವಲ ಅನ್ನಗತಪ್ರಾಣರಾಗಿ, ಅಲ್ಪಾಯುಷಿಗಳಾಗಿ, ಅಜ್ಞಾನಿಗಳಾಗಿ, ಹಗಲಿರುಳೂ ಕೇವಲ ಜೀವನಕ್ಕಾಗಿ ದುಡಿಯಬೇಕಾದ ಈ ಕಾಲದಲ್ಲಿ ಏನು ಮಾಡಬೇಕೆಂದು ಬಹುವಾಗಿ ಆಲೋಚಿಸಿ, ಆಧುನೀಕ, ಅಪಾರ, ಆಸ್ತಿಕ ಜನಸ್ತೋಮಕ್ಕಿರುವ ಏಕೈಕ ದಾರೀದೀಪವಾದ, ಅಪರೋಕ್ಷ ಜ್ಞಾನಿಗಳಿಂದ ಭಗವದ್ ಪ್ರೇರಣೆಯಿಂದ ತಾನಾಗಿ ರಚಿತವಾದ ಪದ, ಪದ್ಯ, ಸುಳಾದಿ, ಉಗಾಭೋಗಾದಿಗಳು ಸಾಮಾನ್ಯವಾದುವುಗಳಲ್ಲ ಅವು ವೇದಗಳ ಆಧಾರದ ಮೇಲೆ

ಶ್ರೀ ವೇದವ್ಯಾಸದೇವರಿಂದ, ರಚಿತವಾದ ಶ್ರೀ ಬ್ರಹ್ಮ ಸೂತ್ರಾದಿಗಳಿಗೂ ಜೀವೋತ್ತ ಮರಾದ ಶ್ರೀಮನ್ ಮಧ್ವಾಚಾರ್ಯರ 37 ಸರ್ವಮೂಲ ಗ್ರಂಥಗಳು (ಭಾಷ್ಯ) ಶ್ರೀ ಜಯತೀರ್ಥರೇ ಮೊದಲಾದವರ ಟೀಕಾ ಗ್ರಂಥ (ಅವರ ಹಿಂದಿನವರಾದ, ಶ್ರೀ ಪದ್ಮನಾಭ ತೀರ್ಥಾದಿಗಳ ಗ್ರಂಥ ಪ್ರಾಚೀನ ಟೀಕಾಗಳೆನಿಸಿಕೊಂಡಿವೆ) ಹಾಗೂ ಮಹದಪರೋಕ್ಷಿಗಳಾದ ಶ್ರೀ ಶ್ರೀಪಾದರಾಜರು, ಶ್ರೀ ವ್ಯಾಸರಾಯರು, ಶ್ರೀ ವಾದಿರಾಜರು, ಶ್ರೀ ರಘೋತ್ತಮತೀರ್ಥರು, ಶ್ರೀ ರಾಘವೇಂದ್ರ ತೀರ್ಥರು, ಶ್ರೀ ಯಾದವಾರ್ಯರು ಹಾಗೂ ಶ್ರೀ ಶ್ರೀನಿವಾಸತೀರ್ಥರು ಇತ್ಯಾದಿ ಜ್ಞಾನಿಗಳಿಂದ ರಚಿತವಾದ ಟಿಪ್ಪಣಿಗಳ ಕೇವಲ ಭಾಷಾಂತರ ಹೊರತು ಮತ್ತೆ ಬೇರಲ್ಲ. ದಾಸ ಸಾಹಿತ್ಯ ಪ್ರಾಕೃತಭಾಷೆಯಲ್ಲಿ ರಚಿತವಾಗಿರುವುದೇ ಒಂದು ದೋಷವಲ್ಲ. ದಾಸ ಸಾಹಿತ್ಯ ರಚಿಸಿದ ಮಹಿಮರು ಶಾಸ್ತ್ರತಿಳಿಯದವರಲ್ಲ. ಅವರ ಈ ಕಾರ್ಯ ನಮ್ಮ ಉದ್ಧಾರಕ್ಕಾಗಿಯೇಹೊರತು ಮತ್ತೆ ಬೇರಲ್ಲಿ ಎಂಬುದನ್ನು ಸ್ಪಷ್ಟ ಪಡಿಸಲು ಶ್ರೇಷ್ಠ ವಾದ ಬ್ರಹ್ಮ ಮೀಮಾಂಸ ಗ್ರಂಥವೆನಿಸಿದ ಸಾಕ್ಷಾತ್ ಶ್ರೀ ವೇದವ್ಯಾಸ ಪ್ರಣೀತ ಶ್ರೀ ಬ್ರಹ್ಮಸೂತ್ರಗಳಿಗೆ ಭಾಷಾಂತರ ರೂಪದ ಕಾರ್ಯವೇ ಶ್ರೀ ಹರಿದಾಸರು ಗಳಿಂದ ರಚಿತವಾದ, ಪುರಂದರ ಉಪನಿಷತ್ ಎನಿಸಿದ ದಾಸಕೃತಿಗಳು ಎಂಬುದನ್ನು ಸೂಕ್ಷ್ಮವಾಗಿ ತೋರಿಸಲು ಈ ಕಾರ್ಯವನ್ನು ಕೈಗೊಂಡೆ, ಏಕಾದಶ ಸ್ಕಂದ ಶ್ರೀಮದ್ ಭಾಗವತದಲ್ಲಿ ಪ್ರಾಕೃತ ಭಾಷೆಯಿಂದ ಬ್ರಹ್ಮಜ್ಞಾನ ಪಡೆಯಲು ಸಾಕ್ಷಾತ್ ಶ್ರೀಕೃಷ್ಣ ಪರಮಾತ್ಮನೇ ಅವಕಾಶ ಕೊಟ್ಟಿದ್ದಾನೆ. **"ಪ್ರಾಕೃತೈರಪಿ"** ಎಂದಿರುತ್ತಾನೆ. ಇಷ್ಟರಿಂದ ಮಾತ್ರಕ್ಕೆ ಸಂಸ್ಕೃತದ ಮೂಲ ಗ್ರಂಥಾವಲೋಕನವೇ ಇಲ್ಲದೇ ಕೇವಲ ಕನ್ನಡದ ಕೆಲವು ಕೃತಿಗಳನ್ನು ಓದಿದರೇ ಸಾಕು ಮೋಕ್ಷಪಡೆಯಲು, ಎಂಬುದರಾಗ್ರಹ ಹರಿದಾಸರಿಗೆ ಖಂಡಿತವಾಗಿಯೂ ಇಲ್ಲ ಇಲ್ಲ. **"ಮಧ್ವಶಾಸ್ತ್ರ ಪ್ರವಚನ ಮುದ್ದು ಕೃಷ್ಣನ ಸಂದರ್ಶನ ಶುದ್ಧ ವಿಜಯ ವಿಠ್ಠಲನ್ನ ಹೊಂದಿಕೊಂಡಿದ್ದವಗೆ"** ಎಂದು ಶ್ರೀ ವಿಜಯದಾಸರು ಹೇಳಿಲ್ಲವೆ ? ಆದ್ದರಿಂದ ಪಂಡಿತಮಾನ್ಯರೆನಿಸಿ ಕೊಂಡಿರು ವವರು ಇಂದಿನಿಂದಲಾದರೂ ಹರಿದಾಸ ಕೂಟದ ಮೇಲೆ ತಮಗಿರುವ ದುರಾಗ್ರಹ ವನ್ನು ಬದಿಗೊತ್ತಿ ಅವರಿಗೆ ಪುರಸ್ಕರಿಸುವರೆಂಬ ಒಂದು ಆಶಾಕಿರಣ ನನಗಿದೆ. ಅಂತೆಯೇ ಪೀಠಾಧಿಪತಿಗಳು. ಹರಿದಾಸಸಾಹಿತ್ಯದ ಪಾವಿತ್ರತೆ ಅದರ ಉಪಯುಕ್ತತೆ ಹಾಗೂ ಮಹಿಮೆಯ ಬಗ್ಗೆ **ಒಂದು ಸಾವಿರ ಪುಟ** ಬರೆಯಬಲ್ಲೆ. ಆದರೆ ಅದು ಪ್ರಸ್ತುತ ಅನಾವಶ್ಯಕವಾದದ್ದರಿಂದ ಕೈಬಿಟ್ಟಿರುತ್ತೇನೆ.

ಈ ಗ್ರಂಥದ ರಚನೆಯ ಮೂಲ ಉದ್ದೇಶ ನಾನು ಹಿಂದೆಯೇ ತಿಳಿಯ ಪಡಿಸಿದಂತೆ ಶ್ರೀ ಹರಿದಾಸಸಾಹಿತ್ಯವು ಕೇವಲ ಒಂದು ಶಾಸ್ತ್ರಗ್ರಂಥದ ಭಾಷಾಂತರವೇ ಹೊರತು ಸ್ವತಂತ್ರ ಗ್ರಂಥವಲ್ಲ ಎಂಬುದಾಗಿದೆ. ಅದನ್ನು ಅತ್ಯಂತ ಸ್ಥೂಲವಾಗಿ ಮಾತ್ರಾ ತಿಳಿಸಲು ಉದ್ದೇಶಿಸಿರುತ್ತೇನೆ. ಏಕೆಂದರೆ ವೇದ, ಸೂತ್ರ, ಭಾಷ್ಯ, ಟೀಕಾ, ಟಿಪ್ಪಣಿ ಅವುಗಳಿಗೆ ದಾಸಸಾಹಿತ್ಯ ಅಕ್ಷರಶಃ ಜೋಡಾವಣೆ ಕಾರ್ಯವೆಂದರೆ ಅದು ಅಮಾನುಷವೇ ಆದೀತು. ಹರಿದಾಸಸಾಹಿತ್ಯವು ಬ್ರಹ್ಮಸೂತ್ರಭಾಷ್ಯಕ್ಕನುಗುಣವಾಗಿ

ಜೀವೋತ್ತಮರ ಸ್ವೈಜಸಿದ್ಧಾಂತ ಭೋದಕಕ್ಕನುಗುಣವಾಗಿ ಸಕಲರಿಂದಲೂ ಸ್ವೀಕರಿಸಲ್ಪಡಬಹುದಾಗಿದೆ ಎಂಬುದನ್ನು ಮಾತ್ರಾ ತಿಳಿಸಲು ಹೊರಟಿದ್ದೇನೆ. ಈ ಗ್ರಂಥ ರಚನಾ ಕಾರ್ಯದತ್ತ ನನ್ನ ಹಿರಿಮೆಯನ್ನು ಪ್ರದರ್ಶನ ಮಾಡಿಕೊಳ್ಳುವುದಕ್ಕಾಗಲಿ. ಪಾಂಡಿತ್ಯ ಪ್ರದರ್ಶನ ಉದ್ದೇಶವಾಗಲಿ, ಪವಿತ್ರತಮವಾದ ಸಂಸ್ಕೃತ ಭಾಷೆಯಲ್ಲಿರುವ ಮೂಲಗ್ರಂಥಗಳ ಬಗ್ಗೆ ಟೀಕಾ ಹಾಗೂ ಪ್ರತಿಘಟನವಾಗಲಿ, ಇತರರನ್ನು (ಪಂಡಿತರನ್ನು) ಅವಹೇಳನ ಮಾಡುವ ಉದ್ದೇಶದಿಂದಾಗಲಿ, ಖಂಡಿತವಾಗಿ ರಚಿಸಿರುವುದಿಲ್ಲ. ಕೇವಲ ಆಧುನೀಕರಾದ ಉತ್ತಮ ಜೀವಿಗಳ ಮನಸ್ಸನ್ನು ಶ್ರೀಮಧ್ವಾಚಾರ್ಯರ ಸರ್ವಮೂಲಗ್ರಂಥಗಳ ಕಡೆ ತಿರುಗಿಸುವ ಸದುದ್ದೇಶವೇ ಆಗಿರುವುದರಿಂದ ಈ ಕಾರ್ಯದಲ್ಲಿ ಸಕಲ ಪಂಡಿತರೂ, ಆಸ್ತಿಕರೂ, ಜ್ಞಾನಿಗಳೂ, ಸಹಾನುಭೂತಿಯನ್ನು ತೋರಿಸುವರೆಂಬ ಧೃಡ ನಿಶ್ಚಯ ನನಗಿದೆ.

ಇದರಲ್ಲಿ ಇರಬಹುದಾದ ದೋಷಾದಿಗಳು ನನ್ನದಾಗಿರುವುದರಿಂದ ಸಕಲ ಪಂಡಿತರೂ ನನ್ನನ್ನು ಮನ್ನಿಸಿ ಇದರಲ್ಲಿರುವ ಕೇವಲ ಉತ್ತಮವಾದ ಅಂಶವನ್ನು ಮಾತ್ರಾ ಸ್ವೀಕರಿಸಿ ಆಶೀರ್ವದಿಸಬೇಕಾಗಿ ಸವಿನಯ ಕೈಮುಗಿದು ಬೇಡುತ್ತಿದ್ದೇನೆ. ನಾವೊಬ್ಬರೇ ಉದ್ಧಾರವಾಗುವ ಸ್ವಾರ್ಥ ಮನೋಭಾವವನ್ನು ಬಿಟ್ಟು ಸಕಲ ಆಸ್ತೀಕರೂ ಉದ್ಧಾರವಾಗಲೂ ನಮ್ಮ ಕೈಲಾದ ಕಾರ್ಯವನ್ನು ಮಾಡುವುದು ಭಗವದ್ ಪೂಜೆ ಎಂಬುದು ನನ್ನ ಅಭಿಪ್ರಾಯ. ಹಾಗಿಲ್ಲದಿದ್ದರೆ ಶ್ರೀ ವೇದವ್ಯಾಸರೇ ಬ್ರಹ್ಮಸೂತ್ರ ಹಾಗೂ ಪುರಾಣಾದಿಗಳನ್ನು ರಚಿಸುತ್ತಲೇ ಇರಲಿಲ್ಲ ಅಲ್ಲವ ?

ಈ ಗ್ರಂಥದಲ್ಲಿ ಪ್ರತಿ ಅಧಿಕರಣದಲ್ಲಿ ಬರುವ ಕೇವಲ ಬ್ರಹ್ಮಸೂತ್ರಗಳು, ಅವುಗಳ ಅತ್ಯಂತ ಸ್ಥೂಲಾರ್ಥ. ಅದಕ್ಕೆ ಅದಷ್ಟು ಸಮೀಪದಲ್ಲಿರುವಂಥಹ ಅಪರೋಕ್ಷ ಜ್ಞಾನಿಗಳ ದಾಸಸಾಹಿತ್ಯ ಜೋಡಾವಣೆ ನಿರೂಪಿತವಾಗಿದೆ. ಕೇವಲ ಬ್ರಹ್ಮಸೂತ್ರಗಳನ್ನೇ ಮಧ್ವಭಾಷ್ಯ, ಟೀಕಾ, ಟಿಪ್ಪಣಿ ಸಮೇತ ಅಧ್ಯಯನ ಮಾಡುವ ಆಕಾಂಕ್ಷೆಯವರಿಗಲ್ಲ ಈ ಗ್ರಂಥ. ದಾಸಸಾಹಿತ್ಯ ಬ್ರಹ್ಮಸೂತ್ರಗಳನ್ನು ಅವಲಂಭಿಸಿದ ಪವಿತ್ರ ಪದ್ಧತಿ ಎಂಬಂಶವನ್ನು ಸ್ಥಿರಪಡಿಸುವುದೇ ಮೂಲ ಉದ್ದೇಶ. ಈ ಗ್ರಂಥವನ್ನು ನನಗೆ ಜನ್ಮವಿತ್ತ ಶ್ರೀರಾಘವೇಂದ್ರರ ಸಂಪೂರ್ಣ ಅನುಗ್ರಹಕ್ಕೆ ಪಾತ್ರರಾಗಿದ್ದ ಶ್ರೀ ಚಿಂಚೋಳಿ ಮಹಿದಾಸಾಚಾರ್ಯರ ಜೇಷ್ಠ ಪುತ್ರರಾದ ಶ್ರೀ ಚಿಂಚೋಳಿ ರಾಘವೇಂದ್ರಬಾಳಾಚಾರ್ಯರು ಹಾಗೂ ಅವರ ಧರ್ಮಪತ್ನಿ ನನ್ನ ತಾಯಿಯವರಾದ ಶ್ರೀಮತಿ ಪದ್ಮಬಾಯಿ (ಕಮಲಮ್ಮ) ಇವರ ಪ್ರೀತಿಗಾಗಿ ಆಶೀರ್ವಾದಕ್ಕಾಗಿ ಮುಖ್ಯವಾಗಿ ಶ್ರೀ ಹರಿ ವಾಯು ಗುರುಗಳ ಅನುಗ್ರಹಾಪೇಕ್ಷಿಯಾಗಿ ರಚಿಸಿರುತ್ತೇನೆ.

ಚಿಂಚೋಳಿ ಪ್ರಹ್ಲಾದಾಚಾರ್ಯ–

**(ಹರಿದಾಸ ಸಾಹಿತ್ಯ ಧುರೀಣ–ದಾಸಸಾಹಿತ್ಯ ರತ್ನ ಇತ್ಯಾದಿ.)**

## ಶ್ರೀ ಬ್ರಹ್ಮಸೂತ್ರ ಭಾಷ್ಯದ ಮಹಿಮಾ

**"ನಹಿಜ್ಞಾನೇನ ಸದೃಶಂ"** ಎಂಬ ಭಗವದ್ ಗೀತಾ ವಾಕ್ಯಾನುಸಾರ ಜ್ಞಾನದಿಂದ ಮಾಡುವ ಸತ್ಕರ್ಮಾಚರಣೆಗೆ ಮಾತ್ರವೇ ಫಲ ದೊರೆತಾಗಿ, ಜ್ಞಾನರಹಿತ್ವ ಸತ್ಕರ್ಮಾಚರಣೆಯೂ ಸಹ ದುರ್ಯೋಧನನ ದೂರ್ವಾಸಾಥಿತ್ಯ ಸಮವಾಗುವ ಸಾಧ್ಯತೆ ಇರೋಣದಿದರಿಂದ ಈ ನೈಜ ತತ್ವಜ್ಞಾನಕ್ಕೆ ಬಹು ಹೆಚ್ಚಿನ ಸ್ಥಾನಮಾನವಿದೆ. 84 ಲಕ್ಷ ಯೋನಿಗಳಲ್ಲಿ ಲಭಿಸಿದ ಈ ತತ್ವ ಜ್ಞಾನಪಡೆಯಲು ಈ ಮಾನವ ಜನ್ಮ ಒಂದೇ ಮೀಸಲು. ಜ್ಞಾನಕ್ಕೆ ಉಗಮ ಅಪೌರುಷೇಯವೆನಿಸಿದ ವೇದಗಳು. ದ್ವಾಪರ ಯುಗದಲ್ಲಿ ಗೌತಮರ ಶಾಪದಿಂದ ನಷ್ಟ ಜ್ಞಾನರಾಗಿದ್ದ ವಿಪ್ರಕುಲ ಸಂರಕ್ಷಣಾರ್ಥವಾಗಿ ಸಾಕ್ಷಾತ್ ಶ್ರೀಮನ್ ನಾರಾಯಣನು ಶ್ರೀ ವೇದವ್ಯಾಸ ದೇವರಾಗಿ ಅವತರಿಸಿ ವೇದ ವಿಭಾಗಮಾಡಿ, ಋಗ್ವೇದ, ಯಜುರ್ವೇದ, ಸಾಮವೇದ ಹಾಗೂ ಅಥರ್ವಣ ವೇದ ಎಂದು ವಿಭಾಗಿಸಿದ್ದು ಅಲ್ಲದೇ, ಸ್ತ್ರೀ ಶೂದ್ರ ಬ್ರಹ್ಮಬಂಧುಗಳ ಉದ್ಧಾರಾರ್ಥ 18 ಪುರಾಣಾದಿಗಳನ್ನು ರಚಿಸಿ ಅನುಗ್ರಹಿಸಿದ, ಬರೆದವನು ಸಾಕ್ಷಾತ್ ಗಣಪತಿ.

**ಭಾಷ್ಯ :-**

**1) ದ್ವಾಪರೇ ಸರ್ವತ್ರ ಜ್ಞಾನ ಅಕುಲೀ ಭೂತೇ ತನ್ನಿರ್ಣಯಾಯ**
**ಬ್ರಹ್ಮರುದ್ರೇಂದ್ರಿಯಾದಿಬಿರರ್ಥಿತೋ ಭಗವನ್ನಾರಾಯಣೋ**
**ವ್ಯಾಸತ್ವೇನಾವತತಾರ ||**

**2) ಗೌತಮಸ್ಯ ಋಷೇಃ ಶಾಪಾಜ್ಞಾನೇ ತತ್ವಜ್ಞಾನತಾಂಗತೇ |**
**ಸಂಕೀರ್ಣ ಬುದ್ಧಯೋದೇವಾ ಬ್ರಹ್ಮ ರುದ್ರ ಪುರಸ್ಸರಾಃ |**
**ಶರಣ್ಯಂ ಶರಣಂ ಜಗ್ಮುರ್ನಾರಾಯಣ ಮನಾಮಯಮ್ ||**

**3) ಪುವಸ್ತುಸ್ಯಾರ್ಥ ವಿತ್ತಯೇ | ಚಕಾರ ಬ್ರಹ್ಮ ಸೂತ್ರಾಣಿ**
**ಯೇಷಾಂ ಸೂತ್ರತ್ವಮಂಜಸಾ ||**

ಈ ಕಥಾ ಭಾಗವನ್ನು ತತ್ವ ಪ್ರದೀಪ ಹಾಗೂ ಸ್ಕಾಂದಪುರಾಣದಲ್ಲಿ ವಿಸ್ತರಿಸಲಾಗಿದ. ಅಂದರೆ ಬ್ರಹ್ಮ ರುದ್ರಾದಿಗಳ ಪ್ರಾರ್ಥನಾನುಸಾರ ಶ್ರೀ ನಾರಾಯಣನೇ ಶ್ರೀ ವೇದವ್ಯಾಸರಾಗಿ ಅವತರಿಸಿ, ವೇದ ವಿಭಾಗವನ್ನು 4 ಭಾಗವಾಗಿ ಮಾಡಿದ್ದು ಅಲ್ಲದೇ ವೇದಾರ್ಥ ನಿರ್ಣಾಯಕವಾದ 564 ಬ್ರಹ್ಮಸೂತ್ರಗಳನ್ನು 18 ಪುರಾಣಗಳನ್ನೂ ರಚಿಸಿದನು.

## ಬ್ರಹ್ಮಸೂತ್ರ ಎಂದರೇನು ?

ಬ್ರಹ್ಮ ಎಂದರೆ ವೇದ ಹಾಗೂ ತದರ್ಥ ಭೋಧಕವಾದ ಪರಬ್ರಹ್ಮ ಅತನ ಸ್ವರೂಪವನ್ನು ನಿರ್ಣಯಿಸಲು ರಚಿಸಿದ ಸೂತ್ರಗಳಿಗೆ ಬ್ರಹ್ಮಸೂತ್ರ" ಎನ್ನುವರು.

## ಬ್ರಹ್ಮಸೂತ್ರ ಲಕ್ಷಣ

**ಅಲ್ಪಾಕ್ಷರಮಸಂದಿಗ್ಧಂ ಸಾರವದ್ವಿಶ್ವತೋ ಮುಖಮ್ |**
**ಅಸ್ತೋಭಮನವದ್ಯಂ ಚ ಸೂತ್ರಂ ವಿದೋ ವಿದುಃ ||**

ಸೂತ್ರಗಳ ವಿವಕ್ಷಿತಾ ಸಿದ್ಧಿಗಾಗಿ ಅತ್ಯಾವಶ್ಯಕವಾದಷ್ಟೇ ಅಕ್ಷರಗಳನ್ನು ಮಾತ್ರಾ ಉಪಯೋಗಿಸಿಕೊಂಡಿರುವುದು ಇದನ್ನು "ಬ್ರಹ್ಮ ಮೀಮಾಂಸಾ ಶಾಸ್ತ್ರ" ಎಂದೂ ಕರೆಯುವರು.

## ಬ್ರಹ್ಮ ಸೂತ್ರದ ಮುಖ್ಯ ಪ್ರಮೇಯ

ಪರಮಾತ್ಮನಾದ ಶ್ರೀಮನ್ನಾರಾಯಣನೇ ಸರ್ವೋತ್ತಮನಾದವನು. ಅವನು ಅನಂತ ಕಲ್ಯಾಣ ಗುಣ ಪರಿಪೂರ್ಣನಾಗಿ ಸರ್ವದೋಷರಹಿತನಾಗಿರುವನು. ಅವನ ಅವತಾರಾಧಿಗಳಲ್ಲಾಗಲೀ, ಅವಯವಗಳಲ್ಲಾಗಲೀ ಪರಸ್ಪರ ಭೇದವಿಲ್ಲದೆ ಅಪ್ರಾಕೃತ ಶರೀರ, ಜೀವರುಗಳು ಇವನಿಂದ ಅತ್ಯಂತ ಭಿನ್ನರು, ಪಂಚಭೇಧ ತಾರತಮ್ಯ ಎಲ್ಲಿಡೆ ಮುಕ್ತಾವಸ್ಥೆಯಲ್ಲೂ ಇರುತ್ತದೆ. ಸಕಲ ವೇದಗಳೂ ಶ್ರೀ ಹರಿಯಲ್ಲೇ ಸಮನ್ವಯ ವಾಗುತ್ತಲಿವೆ, ಮತ್ತು ಮೋಕ್ಷಕ್ಕೆ ಶ್ರೀಹರಿ ಪ್ರಸಾದವೇ ಮುಖ್ಯ ಎಂಬುದನ್ನು ತಿಳಿಸುತ್ತಲಿದೆ.

## ಶ್ರೀ ಮಧ್ವಾಚಾರ್ಯರ ಭಾಷ್ಯ ರಚನೆಗೆ ಕಾರಣ.

ತಮ್ಮಿಂದ ರಚಿತವಾದ ಬ್ರಹ್ಮಸೂತ್ರ ಭಾಷ್ಯಗಳಿಗೆ ಸಮಂಜಸಾರ್ಥ ಘೋಷಕ ವಾದ ಭಾಷ್ಯವು ಏಕ ವಿಂಶತಿ ಮತಾಚಾರ್ಯ ನಿರ್ಮಿತ ಗ್ರಂಥಗಳಲ್ಲಿ ದೊರೆಯದೇ ಸುಜೀವಿಗಳಿಗೆ ತತ್ವ ವಿಪ್ಲವ ಒದಗಿದಾಗ ಶ್ರೀ ಮುಖ್ಯಪ್ರಾಣ ಅವತಾರರಾದ ಶ್ರೀ ಮದಾಚಾರ್ಯರಿಗೆ ಭಾಷ್ಯರಚಿಸಲು ಶ್ರೀ ವೇದವ್ಯಾಸರು ತಿಳಿಸಿದರು.

**ಕುರು ಸೂತ್ರ ಭಾಷ್ಯಮವಿಲಂಬಿತಂ ವ್ರಜೇಃ |**
**ಸುಮತೇನ ಯೋಜಯಿಕವೇಃ ಶ್ರುತಿಸ್ಮೃತೀಃ ||** (ಸುಮಧ್ವವಿಜಯ)

## ಬ್ರಹ್ಮಸೂತ್ರದ ಅಧಿಕರಣ ಹಾಗೂ ಸೂತ್ರಗಳ ವಿವರ

### ಅಧಿಕರಣ ಎಂದರೇನು ?

**ವಿಷಯೋ ವಿಶಯಶ್ಚೈವ ಪೂರ್ವ ಪಕ್ಷಸ್ತಥೋತ್ತರಃ |**
**ಪ್ರಯೋಜನಂ ಚ ಪಂಚೈತೇ ಪ್ರಾಂಚೋ ಧಿಕರಣಂ ವಿದುಃ ||**

ವಿಷಯ-ಸಂಶಯ-ಪೂರ್ವ ಪಕ್ಷ-ಸಿದ್ಧಾಂತ-ಪ್ರಯೋಜನ.

ಈ (5) ಐದೂ ಒಟ್ಟಿಗೆ ಸೇರಿದರೆ ಅಧಿಕರಣ ಎನ್ನುವರು.

ಎಷ್ಟು ?

**ಶ್ರೀ ಮಧ್ವಾಚಾರ್ಯರ ಭಾಷ್ಯಪ್ರಕಾರ ಸೂತ್ರಗಳು 564, ಅಧಿಕರಣಗಳು 223**
ಶಂಕರಾಚಾರ್ಯರ ಭಾಷ್ಯ ಪ್ರಕಾರ ಸೂತ್ರಗಳು 555, ಅಧಿಕರಣಗಳು 192
ರಾಮಾನುಜಾಚಾರ್ಯರ ಭಾಷ್ಯ ಪ್ರಕಾರ ಸೂತ್ರಗಳು 545, ಅಧಿಕರಣಗಳು 156

## ಅಧಿಕರಣಗಳ ಸಂಖ್ಯಾ ವಿವರ

**"ಮಧ್ವಮತವೇ ಮತವು ಸಕಲ ಶ್ರುತಿ ಸಮ್ಮತವು"** ಎಂದು ಶ್ರೀ ವಿಜಯ ದಾಸರು ಹೇಳಿದ ವಚನ ಅಕ್ಷರಶಃ ಸತ್ಯವಾದುದು ಆದ್ದರಿಂದ ಬ್ರಹ್ಮಸೂತ್ರಗಳಿಗೆ 223 ಅಧಿಕರಣಗಳೂ 564 ಸೂತ್ರಗಳೂ ಇರುವುದೆಂಬ ಜೀವೋತ್ತಮರಾದ ಶ್ರೀ ಮಧ್ವಾ ಚಾರ್ಯರ ವಾಕ್ಯವೇ ಅತ್ಯಂತ ಸೂಕ್ತವಾದುದು, ಅದರ ವಿವರವನ್ನು ತಿಳಿಯೋಣ.

## ಅಧಿಕರಣಗಳು ಹಾಗೂ ಅಧ್ಯಾಯಗಳು

| **ಪ್ರಥಮಾಧ್ಯಾಯ** | **ದ್ವಿತೀಯಾಧ್ಯಾಯ** | **ತೃತೀಯಾಧ್ಯಾಯ** | **ಚತುರ್ಥಾಧ್ಯಾಯ** |
|---|---|---|---|
| **ಸಮನ್ವಯಾಧ್ಯಾಯ** | **ಅವಿರೋಧಾಧ್ಯಾಯ** | **ಸಾಧನಾಧ್ಯಾಯ** | **ಫಲಾಧ್ಯಾಯ** |
| **ನಾಮಪಾದ** | **ಯುಕ್ತಿ ಪಾದ** | **ವೈರಾಗ್ಯಪಾದ** | **ಕರ್ಮಕ್ಷಯ ಪಾದ** |
| ಅನ್ಯತ್ರ ಪ್ರಸಿದ್ಧ ನಾಮಶಬ್ದ ಸಮನ್ವಯವಿದ | ಯುಕ್ತಿ ವಿರೋಧ | ವೈರಾಗ್ಯ ವಿಚಾರ | ಕರ್ಮಕ್ಷಯ ರೂಪ ಮೋಕ್ಷ ಸ್ವರೂಪ |
| **ಲಿಂಗಪಾದ** | **ಸಮಯಪಾದ** | **ಭಕ್ತಿಪಾದ** | **ಉತ್ಕ್ರಾಂತಿಪಾದ** |
| ಅನ್ಯತ್ರ ಪ್ರಸಿದ್ಧ ಲಿಂಗಶಬ್ದ ಸಮನ್ವಯವಿದೆ | ಸಮಯ ವಿರೋಧ | ಭಗವನ್ಮಹಿಮಾ | ದೇವತೆಗಳ ದೇಹಲಯ ರೂಪ, ಮೋಕ್ಷ ಸ್ವರೂಪ |
| **ನಾಮಲಿಂಗಪಾದ** | **ಶ್ರುತಿಪಾದ** | **ಉಪಾಸನಾಪಾದ** | **ಮಾರ್ಗಪಾದ** |
| ಉಭಯತ್ರ ಪ್ರಸಿದ್ಧ ಶಬ್ದಗಳ ಸಮನ್ವಯ ವಿದ | ಶ್ರುತಿವಿರೋಧ | ಉಪಾಸನಾಸ್ವರೂಪ | ಗಮ್ಯರೂಪ ಮೋಕ್ಷಸ್ವರೂಪ |

| **ನಾಮಲಿಂಗ ಪಾದ** | | **ನ್ಯಾಯೋಪೇತ ಪಾದ** | | **ಜ್ಞಾನಪಾದ** | | **ಭೋಗಪಾದ** | |
|---|---|---|---|---|---|---|---|
| ಅನ್ಯತ್ರೈವ ಪ್ರಸಿದ್ಧ ಶಬ್ದಗಳ ಸಮನ್ವಯ ಸಮರ್ಥನೆ ಇದೆ | | ನ್ಯಾಯೋಪೇತ ಶ್ರುತಿ ವಿರೋಧ | | ಜ್ಞಾನಸಮಹಿಮಾ | | ಭೋಗ ರೂಪ ಮೋಕ್ಷ ಸ್ವರೂಪ | |
| **ಅಧಿಕರಣ ಸಂಖ್ಯೆ** | **ಸೂತ್ರ ಸಂಖ್ಯೆ** | **ಅಧಿಕರಣ ಸಂಖ್ಯೆ** | **ಸೂತ್ರ ಸಂಖ್ಯೆ** | **ಅಧಿಕರಣ ಸಂಖ್ಯೆ** | **ಸೂತ್ರ ಸಂಖ್ಯೆ** | **ಅಧಿಕರಣ ಸಂಖ್ಯೆ** | **ಸೂತ್ರ ಸಂಖ್ಯೆ** |
| 12 – | 31 | 11 – | 38 | 20 – | 29 | 8 – | 19 |
| 7 – | 32 | 12 – | 45 | 20 – | 42 | 10 – | 22 |
| 14 – | 43 | 19 – | 53 | 42 – | 68 | 6 – | 16 |
| 7 – | 29 | 13 – | 23 | 11 – | 51 | 11 – | 23 |
| **40 –** | **135** | **55 –** | **159** | **93 –** | **190** | **35 –** | **80** |

## ಶ್ರೀ ಮಧ್ವಾಚಾರ್ಯರ ಬ್ರಹ್ಮಸೂತ್ರ ಭಾಷ್ಯದ ಆದಿಶ್ಲೋಕ

**ನಾರಾಯಣಂ ಗುಣೈಸ್ಸರ್ವೈರುದೀರ್ಣಂ ದೋಷವರ್ಜಿತಂ ।**
**ಜ್ಞೇಯಂ ಗಮ್ಯಂ ಗುರೂಂಶ್ಚಾಪಿ ನತ್ವಾ ಸೂತ್ರಾರ್ಥ ಉಚ್ಯತೇ ॥**

ಸರ್ವ ಗುಣ ಪರಿಪೂರ್ಣನಾದ, ಸರ್ವದೋಷರಹಿತನಾದ, ಜ್ಞೇಯನಾದ, ಗಮ್ಯನಾದ, ನಾರಾಯಣನನ್ನೂ ಗುರುವನ್ನೂ ವಂದಿಸಿ ಸೂತ್ರಾರ್ಥ ಉಕ್ತವಾಗುತ್ತದೆ.

ಈ ಪ್ರಥಮ ಶ್ಲೋಕದಲ್ಲೇ ಶ್ರೀಮಧ್ವಾಚಾರ್ಯರು ನಾಲ್ಕು ಅಧ್ಯಾಯಗಳ ಅಭಿಪ್ರಾಯವನ್ನು ತಿಳಿಸುತ್ತಿದ್ದಾರೆ.

1) **"ಗುಣೈಸ್ಸರ್ವೈರುದೀರ್ಣಂ"** ಎಂಬ ಪದದಿಂದ **ಪ್ರಥಮಾಧ್ಯಾಯ**ವನ್ನೂ
2) **"ದೋಷವರ್ಜಿತಂ"** ಎಂಬ ಪದದಿಂದ **ದ್ವಿತೀಯಾಧ್ಯಾಯ**ವನ್ನೂ
3) **"ಜ್ಞೇಯಂ"** ಎಂಬ ಪದದಿಂದ **ತೃತೀಯಾಧ್ಯಾಯ**ವನ್ನೂ
4) **"ಗಮ್ಯಂ"** ಎಂಬ ಪದದಿಂದ **ಚತುರ್ಥಾಧ್ಯಾಯ**ವನ್ನು ತಿಳಿಸಿದ್ದಾರೆ.

**ಪ್ರಥಮಾಧ್ಯಾಯಕ್ಕೆ "ಸಮನ್ವಯಾಧ್ಯಾಯ"** ಎಂದಿರೋಣದರಿಂದ **ಇದರಲ್ಲಿ ಸರ್ವ ವರ್ಣ ಪದಾತ್ಮಕ ಅಶೇಷ ಶಬ್ದ ಸಮನ್ವಯಾದ್ವಾರಾ ಬ್ರಹ್ಮನಿಗೆ ಅಶೇಷ ಗುಣಪರಿಪೂರ್ಣತ್ವವು ಸಮರ್ಥಿತ ವಾಗುತ್ತಲಿದೆ.**

**ದ್ವಿತೀಯಾಧ್ಯಾಯಕ್ಕೆ "ಅವಿರೋಧ್ಯಾಯ"** ಎಂಬುಹೆಸರು ಇದರಲ್ಲಿ ಯುಕ್ತಿ ವಿರೋಧ, ಸಮಯ ವಿರೋಧ, ಶ್ರುತಿ ವಿರೋಧ, ನ್ಯಾಯ ವಿರೋಧ ಎಂಬ ಚತುರ್ವಿಧ ವಿರೋಧ ಪರಿಹಾರ ದ್ವಾರಾ ಬ್ರಹ್ಮನು ಅಶೇಷ ದೋಷದೂರ ಎಂದು ಸಮರ್ಥಿಸುತ್ತಲಿದ್ದಾರೆ.

**ತೃತೀಯಾಧ್ಯಾಯಕ್ಕೆ "ಸಾಧನಾಧ್ಯಾಯ"** ಎಂದುಹೆಸರು, ಇದರಲ್ಲಿ ವೈರಾಗ್ಯದಿಂದ ಹುಟ್ಟುವ ದೃಢ ಭಕ್ತಿಯಿಂದ ಉಪಾಸನೆಯಿಂದಾಗುವ ಜ್ಞಾನಕ್ಕೆ ವಿಷಯನೇ ಬ್ರಹ್ಮ ಎಂದು ತಿಳಿಸಿದರು.

**ಚತುರ್ಥಾಧ್ಯಾಯಕ್ಕೆ "ಫಲಾಧ್ಯಾಯ"** ಎಂದುಹೆಸರು. ಇದರಲ್ಲಿ ಕರ್ಮಕ್ಷಯ, ಉತ್ಕ್ರಾಂತಿ-ಮಾರ್ಗ, ಭೋಗ ಈ ಚತುರ್ವಿಧ ಮೋಕ್ಷ ದಾತಾ ಬ್ರಹ್ಮನೆಂದು ಸಮರ್ಥಿಸಿರುತ್ತಾರೆ.

## ಶ್ರೀ ಪ್ರಾಣೇಶ ದಾಸರ ಬ್ರಹ್ಮಸೂತ್ರ ಭಾಷ್ಯ ಸುಳಾದಿ

**ರಾಗ: ಶಂಕರಾಭರಣ** **ತಾಳ: ಧ್ರುವ**

ಶ್ರೀ ವಿಷ್ಣುವಿನ ದಿವ್ಯ ಶ್ರವಣ ಮನನ ಧ್ಯಾನ- ಈ ವಿಧವಾದ ವಿಚಾರವನ್ನು ।
ಈ ವಸುಧೆಯೊಳಗೆ ತ್ರಿವಿಧಾಧಿಕಾರಿ-ಭಾವ ಶುದ್ಧಿಯಲಿ ಈ ಬಗೆ ವಿಚಾರಿಸೆ ।
ಶ್ರೀವರ ಕರುಣಿಸಿ ತನ್ನಪರೋಕ್ಷವಿತ್ತು-ಸ್ಥಾವರ ಚೇತನ ಜಗಕೆ ಜನ್ಮಾದಿಕರ್ತ ।
ಜೀವ ಭಿನ್ನರು ಕಣೋ ಸರ್ವೇಶ-ಪಾವನವಾದ ನಾಲ್ಕು ವೇದ ಭಾರತವರ ।
ಭಾವುಕ ಪಂಚರಾತ್ರ. ಮೂಲರಾಮಾಯಣ- ಈ ವಿಧವಾದ ಶಾಸ್ತ್ರಗಳನ್ನು ।
ಆ ಉಪಕ್ರಮ ಉಪಸಂಹಾರ ಅಭ್ಯಾಸ ಕೇವಲವಾದ ಅಪೂರ್ವಕ ಫಲ ।
ಅರ್ಥವಾದ ಉಪಪತ್ತಿ ಮೊದಲಾದ ಲಿಂಗದಿಂದ ।
ಯಾವದ್ ವೇದಾರ್ಥವ ವಿಚಾರಿಸಿ- ಅವಾವ ಬಗೆಯಿಂದ ।
ಹರಿ ಸರ್ವೋತ್ತಮ-ಭಾವಜ್ಞ ಜನರೆಲ್ಲಾ ತಿಳಿದು ನೋಡಿ ।
ಈ ವಿಧವಾದ ಈಕ್ಷತಃ ಕರ್ಮನೆನಿಸುವ-ಈ ವಾಸುದೇವನಿಗೆ ಸಮಸ್ತವಾದ ಶಬ್ದ ।
ಅವಾಚ್ಯತ್ವ ಪೇಳುವ ಪಾಪಿಗೆ ಏನೆಂಬೆ-ದೇವೇಶನಾದ ಪ್ರಾಣೇಶ ವಿಠಲನು ಈ ವಿಧ ತಿಳಿದು ಕಾವಕರುಣಿ ॥

**ಮಟ್ಟ ತಾಳ**

ಸಕಲ ಶಬ್ದಗಳು ನಾಲ್ಕು ವಿಧವಯ್ಯ - ಪ್ರಕಟದಿಂದ ತತ್ರ ಪಸಿದ್ಧ ಕೆಲವು ಅತ್ರ ಪ್ರಸಿದ್ಧ ಕೆಲವು ॥

ಯುಕುತಿವಂತರು ಕೇಳಿ ಅನ್ಯತ್ರ ಪ್ರಸಿದ್ಧ । ಯುಕುತಿ ಅನ್ಯತ್ರೈವ ಪ್ರಸಿದ್ಧ । ಅಖಿಲಚತುರ್ವಿದ ವಚನಗಳಿಂದ ಪ್ರಾಣೇಶ ವಿಠಲ ಅಕಳಂಕ ತತ್ವದಲಿ ವಾಚ್ಯ । ಪರಮ ವಾಚ್ಯ ॥

**ತ್ರಿಪುಟ ತಾಳ**

ಈ ಶಬ್ದಗಳಿಗೆಲ್ಲಾ ಯುಕ್ತ ಸಮಯ ಶ್ರುತಿ-ದೋಷನ್ಯಾಯೋಪೇತ ಶ್ರುತಿಗಳಿಂದ । ಏ ಸೇಸು ವಿರೋಧವ ಪರಿವಾಚ್ಯತ್ವದಲ್ಲಿ-ಸೂಸಿ ಬಂದರು ವೇದವ್ಯಾಸದೇವ । ಘಾಸಿ ಇಲ್ಲದಂತೆ ಪ್ರಬಲಬಾಧಕ ಪೇಳಿ, ಘಾಸಿಯ ಬಿಡಿಸಿದ ವಿರೋಧವ । ಈ ಸೊಲ್ಲು ಪುಸಿಯಲ್ಲ ವೇದ ವಚನ ಸಿದ್ಧ-ಲೇಶ ಸಂದೇಹಗೊಳಿಸಲ್ಲದು । ತಾಸುತಾಸಿಗೆ ಇದನೇ ಸ್ಮರಿಸಿ ಅಧಿಕಾರಿಗಳು-ದೋಷರಹಿತ ಜ್ಞಾನಾನಂದ ಪೂರ್ಣ । ಶ್ರೀಶ ಒಬ್ಬನೇ ಎಂದು ಪಾಡಿರೋ ನಿತ್ಯ-ಶ್ರೀಶ ಪ್ರಾಣೇಶವಿಠಲನೊಳ್ಪ ಕರುಣದಿ ॥

**ಅಟ್ಟತಾಳ**

ಸ್ವರ್ಗಾದಿಗಳಲಿ ಗತಿ ಅಗತಿ-ಮುಖ್ಯ-ದುರ್ಗಮ ದುಃ ಖಗಳ ತಿಳಿದು ನಿರ್ವೇದದಿ। ಭಾರ್ಗವೀರಮಣ ಅತಿಶಯ ಮಹಿಮೆಗಳ-ನಿರ್ಗತದಲಿ ತಿಳಿದು ಹರುಷದಿ ತನು ವೃಬ್ಬಿ । ನಿರ್ಗಮವಿಲ್ಲದ ಭಕುತಿ ಸಂಪಾದಿಸಿ-ಭರ್ಗಪ್ರಿಯನ ಮಾನಸದಲ್ಲಿ ನಿಲ್ಲಿಸಿ । ದುರ್ಗತಿ ಮಾರ್ಗವ ದೂರಬಿಟ್ಟು ಪ್ರಾ । ವರ್ಗ ಪ್ರದಾತನ್ನ ಯೋಚನೆ ಅನುಸರಿಸಿ । ನಿರ್ಗಮಿಸದಲೆ ಧೇನಿಸಿದರೆ ಕರುಣಾಬ್ಧಿ-ಸರ್ಗದಮಿತ ತನ್ನಾಪರೋಕ್ಷ ಮಾರ್ಗವ ನೀವನು ಮಿಗೆ ತಡಿಮಯಾಗದೆ.
ಸ್ವರ್ಗಾಪವರ್ಗದಿ ಪ್ರಾಣೇಶ ವಿಠಲ-ವಾಲ್ಗಯಿಸಿ ಕೊಂಬನು ಕರುಣದಿಂದೀ ಬಗೆ ॥

**ಆದಿತಾಳ**

ಈ ತರುವಾಯದಿ ಅಖಿಲ ಜನರ ಕರ್ಮ-ವ್ರಾತವ ಕಳೆವನು ವದನೆ ಮನೆ ಮಾಡಿ । ಶ್ರೀ ತರುಣೀಶನು ಸಕಲ ಜೀವರ ದೇಹ-ಘಾತ ಉತ್ಕ್ರಾಂತಿ ಭೇದದಿ ಅರ್ಚಿನಾದಿ ನೀತ ಮಾರ್ಗದಿಂದ । ನೀರಜಭವನಿಂದ ಪ್ರೀತಿಯಿಂದಲಿ ತನ್ನ ಸೇರಿಸಿ ಕೊಂಬನು । ವೀತಲಿಂಗರ ಮಾಡಿ ವಿಧಿ ಮುಖರೆಲ್ಲರ । ಈ ತರುವಾಯ ದಿನ ಭುಂಜಿಸಿದ ಭೋಗ-ಜಾತವ ಕೊಡುತಲಿ ಜನನ ಮರಣಮಿಗೆ । ವಾತ ಜನಕ ನಮ್ಮ ಪ್ರಾಣೇಶ ವಿಠಲನು ಈತೆರದಲಿ ಜೀವ ಜಾತವ ಪಾಲಿಪ ।

**ಜೊತೆ**

ದೋಷ ರಹಿತ ಗುಣಪೂರ್ಣನೆಂದರಿತರೆ । ವಾಸುದೇವ ವಲಿವ ಪ್ರಾಣೇಶವಿಠಲ

## ಶ್ರೀ ವೇದವ್ಯಾಸರು

**ರಾಗ–ಅಸಾವೇರಿ** **ತಾಳ–ಅಟ್ಟತಾಳ**

ಮಧ್ವಾಂತರ್ಗತ ವೇದವ್ಯಾಸಾ – ಕಾಯೋ । ಶುದ್ಧ ಮಾರುತಿಯೇ ಸರ್ವೇಶ ॥ ಪ ॥

ಶ್ರದ್ಧೆಯಿಂದಲಿ ನಿನ್ನ ಭಜಿಸುವ ಭಕುತರಿಗೆ । ಬುದ್ಧ್ಯಾದಿಗಳ ಕೊಟ್ಟುದ್ಧರಿಸೋ ದೇವರ ದೇವ ॥ ಅ ॥

ದ್ವಾಪರದಲಿ ಒಬ್ಬ ಮುನಿಪ- ತನ್ನ ಕೋಪದಿಂದಲಿ ಕೊಟ್ಟ ಶಾಪ ।
ಶಾಪಿಸಲು ಜ್ಞಾನ ಲೋಪ-ವಾಗೆ ಅಪಾರ ತತ್ವ ಸ್ವರೂಪ ॥
ಶ್ರೀಪತಿಯೆ ಕಾಯೆಂದು ಮೊರೆಯಿಡೆ, ಪಾಪ ವಿರಹಿತಳಾದ ಯಮುನೆಯ ।
ದ್ವೀಪದಲಿ ಅಂಬಿಗರ ಹೆಣ್ಣಿನ ರೂಪಗೊಲಿದವಳಲ್ಲಿ ಜನಸಿದೆ ॥ ೧ ॥

ವೇದವಾದಗಳೆಲ್ಲ ಕೆಡಲು-ತತ್ವವಾದಿ ಜನರು ಬಾಯಿಬಿಡಲು
ಮೇದಿನೀಸುರರು ಮೊರೆಯಿಡಲು-ನಾನಾವೇದ ವಿಭಾಗಿಸಲು
ಮೋದದಿಂದ ತದರ್ಥ ಬೋಧಕವಾದ ಸೂತ್ರ ಪುರಾಣ ವಿರಚಿಸಿ
ವಾದಿಗಳ ನಿರ್ವಾದ ಮಾಡಿದ, ಸಾಧು ವಂದಿತ ಬಾದರಾಯಣ ॥ ೨ ॥

ಸುಮತಿಗಳಿಗೆ ನೀ ಬೋಧಿಸಿದೆ. ಮಿಕ್ಕ ಕುಮತಿಗಳನು ಛೇದಿಸಿದ ।
ಕ್ರಿಮಿಯಿಂದ ರಾಜ್ಯವಾಳಿಸಿದೆ ಜಗತ್ಸ್ವಾಮಿಚರ್ಯವ ನೀತೋರಿಸಿದೆ ।
ವಿಮಲರೂಪನೆ ಕಮಲನಾಭನೆ ರಮೆಯ ಅರಸನೆ ರಮ್ಯ ಚರಿತನೆ ।
ಮಮತೆಯಲಿ ಕೊಡು ಕಾಮಿತಾರ್ಥವ ನಮಿಸುವೆನು **ಹಯವದನ** ಮೂರುತಿ ॥ ೩ ॥

### ಪ್ರಾಕೃತಭಾಷೆ ಪರಮಾತ್ಮನಿಗೆ ಸಮ್ಮತವೆ ?

ಶ್ರೀ ಮದ್ಭಾಗವತದ ಏಕಾದಶ ಸ್ಕಂಧದಲ್ಲಿ ಸ್ವಾಮಿಯಾದ ಶ್ರೀಕೃಷ್ಣನೇ ಉದ್ಧವನಿಗೆ ಉಪದೇಶಿಸುವ ಕಾಲದಲ್ಲಿ ಪ್ರಾಕೃತ ಭಾಷೆಗೆ

ಸ್ತವೈರುಚ್ಚಾವ ಚೈಃ ಶ್ರೋತ್ರೈಃ । ಪುರಾಣೈಃ ಪ್ರಾಕೃತೈರಪಿ
ಸ್ತುತ್ವಾ ಪ್ರಸೀದ ಭಗವಾನ್ । ಇತಿ ವಂದೇತ ದಂಡವತ್ ॥

ಎಂದು ಅವಕಾಶ ಕಲ್ಪಿಸಿಕೊಟ್ಟಿರುತ್ತಾನೆ.

ಶ್ರೀ ಮದಾಚಾರ್ಯರು ಡೆಲ್ಲಿ ತುರುಷ್ಕರ ರಾಜನೊಡನೆ ಅವನ ಭಾಷೆಯಲ್ಲೂ ಶ್ರೀ ರಾಘವೇಂದ್ರರು ಆಂಗ್ಲಭಾಷೆಯಲ್ಲಿ ಸರ ಥಾಮಸ್ ಮನ್ರೊ ಜೊತೆಯಲ್ಲಿ ವ್ಯವಹರಿಸಿದ್ದಕ್ಕೆ ಸಾಕಷ್ಟು ಆಧಾರಗಳು ದೊರಕಿವೆ.

ಪ್ರಾಕೃತ ಭಾಷೆಯಲ್ಲಿ ಅಪ್ರಾಕೃತನ ಮಹಿಮೆಯನ್ನು ಹೊಗಳಿದಾಗ ಅದು ದೇವಭಾಷೆ ದೇವಭಾಷೆಯಲ್ಲಿ ತತ್ವ ವಿರೋಧ ಹೇಳಿದರೆ ಅದು ಹೇಯ ಭಾಷೆಯೇ ಸರಿ. ಉದಾಹರಣೆಗೆ :–ಏಕ ವಿಂಶತಿ ಕುಭಾಷ್ಯಾದಿಗಳು ಸಂಸ್ಕೃತದಲ್ಲಿ ಇದ್ದಾಗ್ಯೂ 'ಪ್ರಯೋಜನವೇನು ? ನರಕವೇ ಸಿದ್ಧವಲ್ಲವೇ ?

ಜೀವೋತ್ತಮರ, ಅತ್ಯಂತ ಶಾಸ್ತ್ರ ಸಮ್ಮತವಾದ ಸಿದ್ಧಾಂತ ಬೋಧಕ ಭಾಷೆ ಪ್ರಾಕೃತವಾದರೆ ಏನಾಯಿತು. ಅದರಿಂದ ಪರಮಾತ್ಮನು ಅನುಗ್ರಹಿಸುವುದಿಲ್ಲವೆ ? ಕೇವಲ ಭಾಷಾಪಾಷಂಡತ್ವ ಸಮರ್ಥನೆ ವಿವೇಕವಲ್ಲ.

"ತತ್ವಜ್ಞಾನ್ ಮುಕ್ತಿಭಾಜಃ" ಎಂದಿದೆ ಶ್ರೀ ಹರಿ ವಾಯುಸ್ತುತಿಯಲ್ಲಿ ಇದು ಗಮನೀಯ ವಿಷಯ, ಆದ್ದರಿಂದಲೇ ಮಹಾ ಅಪರೋಕ್ಷ ಜ್ಞಾನಿಗಳಾದ ದೇವಾಂಶ ಸಂಭೂತರಾದ ಶ್ರೀ ನರಹರಿತೀರ್ಥರು, ಶ್ರೀ ಶ್ರೀಪಾದರಾಜರು, ಶ್ರೀ ವ್ಯಾಸರಾಯರು ಶ್ರೀ ವಾದಿರಾಜರು ಹಾಗೂ ಶ್ರೀ ಪುರಂದರದಾಸರು ಶ್ರೀ ವಿಜಯದಾಸರುಶ್ರೀ ಗೋಪಾಲದಾಸರು ಮತ್ತು ಶ್ರೀ ಜಗನ್ನಾಥದಾಸರೇ ಆದಿಯಾದವರೆಲ್ಲಾ ಈ ಹರಿ ದಾಸ ಪಂಥದಲ್ಲಿ ಕಾರ್ಯವಸಗಿ ಪ್ರಾಕೃತ ಭಾಷೆಯಲ್ಲಿ ಲಕ್ಷಾಂತರ ಪದ, ಪದ್ಯ, ಸುಳಾದಿ, ಉಗಾಭೋಗಾದಿಗಳನ್ನು ರಚಿಸಿ ವಿರಾಜಿಸಿರುತ್ತಾರೆ. ಅಶಾಸ್ತ್ರೀಯವಾದ ಅನಾವಶ್ಯಕ ಕಾರ್ಯವಲ್ಲಿ ಜ್ಞಾನಿಗಳು ಎಂದಾದರೂ ತೊಡಗುವರೇ ಎಂಬುದನ್ನು ವಿವೇಕಿಗಳು ಗಮನಿಸಬೇಕು.

ಶ್ರೀ ಶ್ರೀಪಾದರಾಜರು ತಮದೊಂದು ಉಗಾಭೋಗದಲ್ಲಿ ಧ್ಯಾನವು ಕೃತಯುಗ ದಲ್ಲಿ ಯಜನಯಾಗವು ತ್ರೇತಾಯುಗದಲ್ಲಿ ದಾನವಾಂತಕನ ದೇವತಾರ್ಚನೆಯು ದ್ವಾಪರದಲ್ಲಿ । ಈ ಕಲಿಯುಗದಿ ಗಾಯನದಿ ಕೇಶವಾ ಎಂದೊಡೆ ಕೈಗೊಟ್ಟು ಸಲಹುವನು **ರಂಗವಿಠಲ** ಎಂದಿರುತ್ತಾರೆ.

ಹರಿದಾಸ ಸಾಹಿತ್ಯ ಮೋಕ್ಷಹೇತು ಎಂಬುದರ ಬಗ್ಗೆ ನೂರಾರು ಪುಟಗಳು ಬರೆಯಬಲ್ಲೆ, ಆದರೆ ಅದರ ಆವಶ್ಯಕತೆ ಈಗ ಇಲ್ಲಿ ಪ್ರಮೇಯ ಕಂಡು ಬರುತ್ತಿಲ್ಲ. ಕನ್ನಡ ಪದ್ಯವಾದ ಹರಿಕಥಾಮೃತಸಾರಕ್ಕೆ ಸಂಸ್ಕೃತವ್ಯಾಖ್ಯಾನವಿಲ್ಲವೆ ?

**ಶ್ರುತಿ ಪುರಾಣ ಹಾಗೂ ದಾಸಸಾಹಿತ್ಯ ಸಮನ್ವಯ :–**

**ವೇದೇ ರಾಮಾಯಣೇ ಚೈವ ಪುರಾಣೇ ಭಾರತೇ ತಥಾ ।**
**ಆದಾವಂತೇ ಚ ಮಧ್ಯೇ ಚ ವಿಷ್ಣುಃ ಸರ್ವತ್ರ ಗೀಯತೇ ॥**

**(ಹರಿವಂಶ)**

## 1. ಜಿಜ್ಞಾಸಾಧಿಕರಣ

**ಸೂತ್ರ :- ಓಂ ಓಂ ಅಥಾತೋ ಬ್ರಹ್ಮಜಿಜ್ಞಾಸಾ ಓಂ ॥ ೧ ॥**

ಅಧಿಕಾರ ಸಂಪತ್ತ್ಯಾನಂತರದಲ್ಲಿ ಮೋಕ್ಷಸಂಪಾದಿಸಲು ಬ್ರಹ್ಮ ಜಿಜ್ಞಾಸವು ರ್ತವ್ಯವೆಂದೂ, ವಿಶಿಷ್ಟಾಧಿಕಾರ, ಮೋಕ್ಷ ಫಲಕ, ಜೀವಾಸ್ಯ ಧಾರ್ಮಿಕ, ಗುಣ ಪರಿಪೂರ್ಣತ್ವ ಪ್ರಕಾರಕ ಜಿಜ್ಞಾಸಾ ಕರ್ತವ್ಯ ಸಮರ್ಥಿಸಲ್ಪಟ್ಟಿದೆ.

**ದಾಸಸಾಹಿತ್ಯ :-**

ಜಿಜ್ಞಾಸುವಿಗೆ ಜ್ಞಾನ ಕಾರಣ । ಜ್ಞಾನಿಗೆ ಅಪರೋಕ್ಷ ಕಾರಣ ।
ಅಪರೋಕ್ಷಿಗೆ ಅಧಿಕಾನಂದ ಕಾರಣ । ಮುಕ್ತಿಗೆ ತಾನೇ ಫಲರೂಪ ।
**ಸಿರಿ ಕೃಷ್ಣನ** ಪಾದ ಸೇವೆ । ಇದರ ತೂಕಕ್ಕೆ ಸಾಕೇಕೈವಲ್ಯ.

## 2. ಜನ್ಮಾಧಿಕರಣ

**ಸೂತ್ರ :- ಓಂ ಜನ್ಮಾದ್ಯಸ್ಯ ಯತಃ ಓಂ ॥ ೨ ॥**

ವಿಚಾರಕ್ಕೆ ವಿಷಯನಾದ ಬ್ರಹ್ಮನ ಸ್ವರೂಪ ಲಕ್ಷಣವು ಉಕ್ತವಾಗಿದೆ.

ಶ್ರುತಿಯಲ್ಲಿ ಹೇಳಲ್ಪಡುವ ಬ್ರಹ್ಮಶಬ್ದ. ಸರ್ವಗುಣ ಪರಿಪೂರ್ಣನಾದ ಶ್ರೀ ಹರಿಯನ್ನೇ ಹೊರತು ರುದ್ರಾದಿ ಜೀವರುಗಳನಲ್ಲ.

**ದಾಸಸಾಹಿತ್ಯ :-**

ಜಗಜನ್ಮಾದಿಕರ್ತ ಗೋವಿಂದ । ಲೋಕ ಉದುರದಿ ಲಘುವಾಗಿಧರಿಸಿದ
ಮುಕುಂದ ।

**ದಾಸಸಾಹಿತ್ಯ :-**

ಝಗಿ ಝಗಿಸುತ ಪೊಳೆವಾನಂದ । ಸಿಗಮಾಪಳಿಯಿಂದ

[ಶ್ರೀ ಗೋಪಾಲದಾಸರು]

## 3. ಶಾಸ್ತ್ರಯೋನಿತ್ವಾಧಿಕರಣ

**ಸೂತ್ರ :- ಓಂ ಓಂ ಶಾಸ್ತ್ರಯೋನಿತ್ವಾತ್ ಓಂ ॥ ೩ ॥**

ಜಗ ಜನ್ಮಾದಿ ಕರ್ತೃತ್ವವು ಜಿಜ್ಞಾಸ್ಯನಾದ ಬ್ರಹ್ಮನಲ್ಲಿ ಶ್ರುತವಾದ ಪ್ರಯುಕ್ತ ವಿಷ್ಣುವೇ ಬ್ರಹ್ಮನು ಎಂದು ಶಾಸ್ತ್ರಗಳ ಮೂಲಕ ತಿಳಿಯತಕ್ಕದ್ದು.

**ದಾಸಸಾಹಿತ್ಯ :-**

ಇದಕ್ಕೂ ಜನ್ಮಾಧಿಕರಣದ ನುಡಿ ಕೊಡುತ್ತಿದೆ.

## 4. ಸಮನ್ವಯಾಧಿಕರಣ

**ಸೂತ್ರ :- ಓಂ ತತ್ತು ಸಮನ್ವಯಾತ್ ಓಂ || ೪ ||**

ಜಗತ್ಕಾರಣತ್ವವನ್ನು ಪ್ರತಿಪಾದಿಸುವ ಸಕಲ ಶಾಸ್ತ್ರಗಳಿಂದ, ಪರಮಮುಖ್ಯ ವೃತ್ತಿಯಿಂದ ಸರ್ವಗುಣವುಳ್ಳವನೆಂದು ಪ್ರತಿಪಾದಿಸಲ್ಪಡುವವನು ವಿಷ್ಣುವೇಹೊರತು ರುದ್ರಾದಿ ಇತರ ದೇವರುಗಳಲ್ಲ ಎಂದೂ ಉಪಕ್ರಮಾದಿ ತಾತ್ಪರ್ಯ ನಿರ್ಣಾಯಕ ಲಿಂಗಗಳಿಂದ ಸಮರ್ಥಿಸುತ್ತಿದ್ದಾರೆ.

**ದಾಸಸಾಹಿತ್ಯ :-**

1) ಜ್ಞಾನಗಮ್ಯ ಕರುಣಾಸಿಧಿ ಸನ್ನಡಿಗಾನಮಿಸುವ ಪೊರೆ ದೀನದಯಾಳು ಪ್ರೇಸಿಕೇತನ ಪಾಲಯಮಾಂ.

2) "ಶಾಸ್ತ್ರಗೋಚರ ಸಾರಸಂಪನ್ನ" ಅರಿವನೆಂತೋ ನಿನ್ನ **[ಜಗನ್ನಾಥದಾಸರು]**

## 5. ಈಕ್ಷತ್ಯಧಿಕರಣ

**ಸೂತ್ರಗಳು**

**1) ಓಂ ಈಕ್ಷತೇರ್ನಾಶಬ್ದಂ ಓಂ || ೫ ||**

**2) ಓಂ ಗೌಣಶ್ಚೇನ್ನಾತ್ಮಶಬ್ದಾತ್ ಓಂ || ೬ ||**

**3) ಓಂ ತನ್ನಿಷ್ಠಸ್ಯ ಮೋಕ್ಷೋಪದೇಶಾತ್ ಓಂ || ೭ ||**

**4) ಓಂ ಹೇಯತ್ವಾವಚನಾಚ್ಚ ಓಂ || ೮ ||**

**5) ಓಂ ಸ್ವಾಪ್ಯಯಾತ್ ಓಂ || ೯ ||**

**6) ಓಂ ಗತಿಸಾಮಾನ್ಯಾತ್ ಓಂ || ೧೦ ||**

**7) ಓಂ ಶ್ರುತತ್ವಾಚ್ಚ ಓಂ || ೧೧ ||**

ಬ್ರಹ್ಮನಿಗೆ ವಾಚ್ಯತ್ವವನ್ನು ಈ ಕ್ಷಣೇಯತ್ವ ವೇ: ಕರೋಣದಿಂದ ಅವಶ್ಯವಾಗಿ ಅದು ಕೊಡುತ್ತಲಿದೆ. ಗೌಣನಾದ ಜೀವ ವಾಚ್ಯನಲ್ಲ, ಬ್ರಹ್ಮನು ವಾಚ್ಯನಾದುದರಿಂದ ಸರ್ವಜಗತ್ತಿಗೂ ಅವನೇ ಕಾರಣನೆಂದು ಸರ್ವಶಾಸ್ತ್ರವೂ ಪ್ರತಿಪಾದಿಸುವುದು ಯುಕ್ತವೆ ಸರಿ. ಆದಕಾರಣ ಲಕ್ಷಣಕ್ಕೆ ಅತಿವ್ಯಾಪ್ತಿಯಿಲ್ಲ. ಈ ಲಕ್ಷಣಗಳಿಂದ ಕೂಡಿದ ಆ ಬ್ರಹ್ಮನೇ ವಿಷ್ಣುವಾದಪ್ರಯುಕ್ತ ಅತನ ಜಿಜ್ಞಾಸೆಯು ಅತ್ಯಂತ ಸೂಕ್ತ ವಾಗೂ ಯುಕ್ತವಾದ್ದು.

**ದಾಸಸಾಹಿತ್ಯ**

ಬೂದಿಯೊಳಗಡಗಿಪ್ಪನಲನೋ -। ಪಾದಿ ಚೇತನ ಪ್ರಕೃತಿಯೊಳಗ । ನ್ನಾದ ನನ್ನಾತ್ಮಯದಿ ಕರೆಸುವ ಬ್ರಹ್ಮಶಿವರೂಪಿ ॥ ಓದನಪ್ರದ ವಿಷ್ಣು ಪರಮಾ -। ಹ್ಲಾದ ವೀವುತ ತೃಪ್ತಿ ಪಡಿಸುವ -। ಗಾಧ ಮಹಿಮನ ಚಿತ್ರಕರ್ಮವನಾವ ಬಣ್ಣಿಸುವ

**[ಶ್ರೀ ಹರಿಕಥಾಮೃತಸಾರ 24-3]**

## 6. ಆನಂದ ಮಯಾಧಿಕರಣ

**ಸೂತ್ರಗಳು**

1) ಓಂ ಆನಂದಮಯೋ ಭ್ಯಾಸಾತ್ ಓಂ ॥ ೧೨ ॥
2) ಓಂ ವಿಕಾರಶಬ್ದಾನ್ನೇತಿ ಚೇನ್ನ ಪ್ರಾಚುರ್ಯಾತ್ ಓಂ ॥ ೧೩ ॥
3) ಓಂ ತದ್ಧೇತುವ್ಯಪದೇಶಾಚ್ಚ ಓಂ ॥ ೧೪ ॥
4) ಓಂ ಮಾಂತ್ರ ವರ್ಣಿಕಮೇವ ಚ ಗೀಯತೇ ಓಂ ॥ ೧೫ ॥
5) ಓಂ ನೇತರೋ ಅನು ಪಪತ್ತೇಃ ಓಂ ॥ ೧೬ ॥
6) ಓಂ ಭೇದವ್ಯಪದೇಶಾಚ್ಚ ಓಂ ॥ ೧೭ ॥
7) ಓಂ ಕಾಮಾಚ್ಚ ನಾನುಮಾನಾಪೇಕ್ಷಾ ಓಂ ॥ ೧೮ ॥
8) ಓಂ ಅಸ್ಮಿನ್ನಸ್ಯ ಚ ತದ್ಯೋಗಂ ಶಾಸ್ತಿ ಓಂ ॥ ೧೯ ॥

ಅನೇಕಾವರ್ತಿ ಬ್ರಹ್ಮಶಬ್ದವನ್ನು ಹೇಳಿರೋದರಿಂದ ಅನ್ನಮಯಾದಿಗಳ ಬ್ರಹ್ಮನೇ ಆಗಿರಬೇಕು. ಸಾಲದುದಕ್ಕೆ ಸರ್ವಜಗಚ್ಚೇಷ್ಟ ಕತೃತ್ವವನ್ನೂ ಹೇಳಿರೋದರಿಂದಲೂ ಆನಂದಮಯ ಬ್ರಹ್ಮನೆ, ಆದರೆ ಆನಂದಮಯಾದಿ ಶಬ್ದಗಳು ಬ್ರಹ್ಮಾದಿಗಳಿಗೆ ಕೂಡಲಾರದು. ಏಕೆಂದರೆ ಶ್ರೀಹರಿಯು ಜ್ಞಾನದಿಂದ ಮೋಕ್ಷ ಪ್ರಮೇಯವಾಗಿರುವುದರಿಂದ 5 ಕೋಶಾಧಿಗಳೂ ಬ್ರಹ್ಮಶಬ್ದ ಎಲ್ಲವೂ ಸಾಕ್ಷಾತ್ ಶ್ರೀಹರಿಯಲ್ಲಿಯೇ ಸಮನ್ವಯವಾಗುವುದೇ ಹೊರತು ಅನ್ಯರಲ್ಲಿ ಅಲ್ಲ.

**ದಾಸಸಾಹಿತ್ಯ**

ಆರೆರಡು ಸಾವಿರದ ಮೇಲಿ-
ನ್ನೂರು ಐವತ್ತೊಂದು ರೂಪದಿ
ಸಾರಭೋಕ್ತನಿರುದ್ಧ ದೇವನು ಅನ್ನಮಯನೆನಿಪ ॥
ಮೂರೆರಡೂವರೆ ಸಾವಿರದ ಮೇ
ಲ್ಮೂರಧಿಕ ನಾಲ್ವತ್ತು ರೂಪದಿ
ತೋರುತಿಹ ಪ್ರದ್ಯುಮ್ನ ಜಗದೊಳು ಪ್ರಾಣಮಯನಾಗಿ ॥ ೧೩ ॥

ಐರಡು ಕೋಶಗಳೊಳಹೊರಗೆ ಸಂ
ಕರುಷಣೈದು ಸುಲಕ್ಷದರವ-
ತ್ತೆರಡುಸಾವಿರದೇಳಧಿಕಶತ ರೂಪಗಳ ಧರಿಸಿ ॥
ಕರೆಸಿಕೊಂಬ ಮನೋಮಯನು ಎಂ-
ದರವಿದೂರನು ಈರೆರಡು ಸಾ-
ವಿರದ ಮುನ್ನೂರಾದ ಮೇಲ್ನಾಲ್ಕಧಿಕ ಪಿಪ್ಪತ್ತು ॥ ೧೪ ॥

ರೂಪದಿಂ ವಿಜ್ಞಾನಮಯನೆಂ
ದೀ ಪೆಸರಿನಿಂ ವಾಸುದೇವನು
ವ್ಯಾಪಿಸಿಪ ಮಹದಾದಿ ತತ್ತ್ವವ ತತ್ತ್ವತಿಗಳೊಳಗೆ ॥
ಈ ಪುರುಷನಾಮಕ ಶುಭಸ್ವೇ
ದಾಪಳೆನಿಸಿ ರಮಾಂಬೆ ತಾ ಬ್ರ-
ಹ್ಮಾಪರೋಕ್ಷಿಗಳಾದವರ ಲಿಂಗಾಂಗ ಕೆಡಿಸುವಳು ॥ ೧೫ ॥

ಐದು ಸಾವಿರ ನೂರ ಇಪ್ಪ-
ತ್ತೈದು ನಾರಾಯಣನ ರೂಪವ
ತಾ ಧರಿಸಿ ಕೊಂಡನುದಿನದಲಾನಂದ ಮಯನೆನಿಪ ॥
ಐದು ಲಕ್ಷದ ಮೇಲೆ ಎಂಭ-
ತ್ತೈದು ಸಾವಿರ ನಾಲ್ಕು ಶತಗಳ
ಲೈದು ಕೋಶಾತ್ಮಕ ವಿರಿಂಚಾಂಡದೊಳು ತುಂಬಿಹನು ॥ ೧೬ ॥

[ಶ್ರೀಹರಿಕಥಾಮೃತಸಾರ]

## 7. ಅಂತಸ್ಥತ್ವಾಧಿಕರಣ

**ಸೂತ್ರಗಳು**

**1) ಓಂ ಅಂತಸ್ತದ್ಧರ್ಮೋಪದೇಶಾತ್ ಓಂ ॥ ೨೦ ॥**

**2) ಓಂ ಭೇದವ್ಯಪದೇಶಾಚ್ಚಾನ್ಯಃ ಓಂ ॥ ೨೧ ॥**

ಅಂತಸ್ಥನಾಗಿ ಸ್ತುತನಾದವನು ವಿಷ್ಣುವಲ್ಲದೇ ಮತ್ತ್ಯಾರೂ ಅಲ್ಲ. ಏಕೆಂದರೆ ವಿಷ್ಣುವಿನ ಧರ್ಮಗಳಾದ ಕ್ಷೀರಸಮುದ್ರಸ್ಥತ್ವ, ಬ್ರಹ್ಮಜ್ಞೇಯತ್ವ, ಬ್ರಹ್ಮ ಕಪೋಲ ಭೃತ್ವ, ಬ್ರಹ್ಮಾಂಡವೀರ್ಯತ್ವ ಈ ಧರ್ಮಗಳಿರುವುದು ವಿಷ್ಣುವಿನಲ್ಲಿಯೇ. ಆ ವಿಷ್ಣುವು ಇಂದ್ರಾದಿಗಳಿಂದ ಭಿನ್ನನಾಗಿಯೂ ಇರುತ್ತಿದ್ದಾನೆ.

**ದಾಸಸಾಹಿತ್ಯ**

ಮುಖ್ಯ ಕಾರಣ ವಿಷ್ಣುವೇ ಸ್ವತಂತ್ರ ॥ ಪ ॥
ಸಖ್ಯರ ಪೋಷ ಶ್ರೀ ಅಜಭವಾದಿಗಳರಸ ॥ ಅ ॥

**(ಶ್ರೀ ಗೋಪಾಲದಾಸರು)**

## 8. ಆಕಾಶಾಧಿಕರಣ

**ಸೂತ್ರ :- ಓಂ ಆಕಾಶಸ್ತಲ್ಲಿಂಗಾತ್ ಓಂ ॥ ೨೨ ॥**

**ಆಕಾಶ ಇತಿ ಹೋವಾಚ** ಎನ್ನುವ ಛಾಂದೋಗ್ಯ ವ್ಯಾಖ್ಯಾನುಸಾರ ಆಕಾಶ ಶಬ್ದ ವಾಚ್ಯನಾದವನು ಶ್ರೀಹರಿಯು.

**ದಾಸಸಾಹಿತ್ಯ :–**

ಪೊಂದಿಕೊಂಡಿಹ ಸರ್ವರೊಳು ಸಂ -। ಬಂಧವಾಗದೆ ಸಕಲ ಕರ್ಮವ -।
ರಂದದಲಿ ತಾ ಮಾಡಿ ಮಾಡಿಸಿ ತತ್ಫಲಗಳುಣಿದೆ ॥
ಕುಂದದಣುವು ಮಹತ್ತೆನಿಪ ಘಟ -। ಮಂದಿರದಿ ಸರ್ವತ್ರ ತುಂಬಿಗ ।
ಬಾಂಧಳದ ತೆರನಂತೆ ಇರುತ್ತಿದ್ದನು ರಮಾರಮಣ ॥

**(ಶ್ರೀ ಹರಿಕಥಾಮೃತಸಾರ)**

## 9. ಪ್ರಾಣಾಧಿಕರಣ

**ಸೂತ್ರ ಓಂ ಅತ ಏವ ಪ್ರಾಣಃ ಓಂ ॥ ೨೩ ॥**

ಮುಖ್ಯ ಪ್ರಾಣನು ಜೀವನಾದಿಗಳಿಗೆ ಕಾರಣನಾದಾಗ್ಯೂ ಆತನು ಶ್ರೀಹರಿಯ ಆಧೀನನಾದುದರಿಂದ ಶ್ರೀಹರಿಯೇ ಮುಖ್ಯಪ್ರಾಣಶಬ್ದ ವಾಚ್ಯನು.

**ದಾಸಸಾಹಿತ್ಯ :–**

ಪ್ರಾಣನ ಪ್ರಾಣನ ಗುಣಗಣಮಂಡಿತ ವೇಣುಗೋಪಾಲ ವಿಠಲ ಕಲ್ಯಾಣನ ಕೃಷ್ಣನ ನೋಡಿದೆ ಸರ್ವೋತ್ಕೃಷ್ಣನ ಪಾಡಿದೆ ॥

## 10. ಜ್ಯೋತಿರಧಿಕರಣ

**ಸೂತ್ರ :– ಓಂ ಜ್ಯೋತಿಶ್ಚರಣಾಭಿಧಾನಾತ್ ಓಂ ॥ ೨೪ ॥**

"ವಿಷ್ಣುರೇವ ಜ್ಯೋತಿಃ" ಎಂಬ ಶ್ರುತಿಯಂತೆ ವಿಷ್ಣುವೇಜ್ಯೋತಿ ಶಬ್ದ ವಾಚ್ಯ.

ಜ್ಯೋತಿಯೊಳಗಿಪ್ಪನು ಕಪಿಲ ಪುರು -। ಹೂತ ಮುಖದಿಕ್ಪತಿಗಳಿಂದ ಸ -।
ಮೇತನಾಗಿ ದಕ್ಷಿಣಾಕ್ಷಿಯ ಮುಖದೊಳಿಪ ವಿಶ್ವ ॥ ಶ್ವೇತವರ್ಣ ಚತುರ್ಭುಜನು
ಸಂ -। ಪ್ರೀತಿಯಿಂದಲಿ ಸ್ಥೂಲವಿಷಯುಪ । ಚೇತನರಿಗುಂಡುಣಿಪ ಜಾಗ್ರತೆಯಿತ್ತು
ನೃಗಜಾಸ್ಯ ॥

**(ಹರಿಕಥಾಮೃತಸಾರ 8–11)**

## 11. ಗಾಯತ್ರ್ಯಧಿಕರಣ

**ಸೂತ್ರ :– 1) ಓಂ ಛಂದೋ ಭಿಧಾನಾನ್ನೇತಿ ಚೆನ್ನ, ತಥಾ ಚೇತೋ ರ್ಪಣ ನಿಗದಾತ್, ತಥಾ ಹಿ ದರ್ಶನಂ ಓಂ ॥ ೨೫ ॥**

**2) ಓಂ ಭೂತಾದಿಪಾದವ್ಯಪದೇಶೋಪಪತ್ತೇಶ್ಚೈವಂ ಓಂ ॥ ೨೬ ॥**

**3) ಓಂ ಉಪದೇಶಭೇಧಾನ್ನೇತಿ ಚೇನ್ನೋಭಯಸ್ಮಿನ್ನಪ್ಯ ವಿರೋಧಾತ್ ಓಂ ॥ ೨೭ ॥**

ದಾಸಸಾಹಿತ್ಯ :-

ಗತಶೋಕ ಗಾಯಿತ್ರಿ ಪ್ರತಿಪಾದ್ಯ ತತ್ವಾಧಿ । ಪತಿಗಳೆನಿಸುವ ದೇವತೆ ಗಳೊಳಿದ್ದು ಮಾ । ರುತನಿಂದವಡಗೂಡಿ ಪ್ರತಿದೇಹದಲಿ ಯೋ । ಗ್ಯತೆಯನರಿತು ಕರ್ಮಗಳನೀವೆ ಸಾಂ । ಪ್ರತ ಬೇಡಿಕೊಂಬೆ ಅನವರತ ಸಂತೈಸೆಂದು.....ತುತಿಸಬಲ್ಲೆನೆ ನಾನಿನ್ನ ವೇಂಕಟರನ್ನ ॥

(ಶ್ರೀ ಜಗನ್ನಾಥದಾಸರು)

## 12. ಉತ್ತರಪ್ರಾಣಾಧಿಕರಣ

ಸೂತ್ರಗಳು

1) ಓಂ ಪ್ರಾಣಸ್ತಥಾನುಗಮಾತ್ ಓಂ ॥ ೨೮ ॥

2) ಓಂ ನ ವಕ್ತುರಾತ್ಮೋಪದೇಶಾದಿತಿ ಚೇದಧ್ಯಾತ್ಮ ಸಂಬಂಧಭೂಮಾಹ್ಯಸ್ಮಿನ್ ಓಂ ॥ ೨೯ ॥

3) ಓಂ ಶಾಸ್ತ್ರದೃಷ್ಟ್ಯಾ ತೋಪದೇಶೋವಾಮ- ದೇವವತ್ ಓಂ ॥ ೩೦ ॥

4) ಓಂ ಜೀವಮುಖ್ಯಪ್ರಾಣಲಿಂಗಾನ್ನೇತಿ ಚೇನ್ನ ಉಪಾಸಾತ್ರೈವಿಧ್ಯಾ ತ್ ಆಶ್ರಿತತ್ವಾದಿಹ ತದ್ಯೋಗಾತ್ ಓಂ ॥ ೩೧

ಇಲ್ಲಿ ಪ್ರಾಣಃ ಎಂದರೆ ಮುಖ್ಯಪ್ರಾಣ ಎಂದಲ್ಲ. ಇದು ವಿಷ್ಣು ಲಿಂಗಗಳಿಂದೇ ಪ್ರಮಿತಳಾಗಿರುವುದರಿಂದ ಪ್ರಾಣಶಬ್ದ ವಾಚ್ಯ ವಿಷ್ಣು ಎಂದೇ ಅವಶ್ಯವಾಗಿ ಅಂಗೀ- ಕರಿಸಬೇಕು. ಐತರೇಯದಲ್ಲಿ ಶ್ರುತನಾದ ಪ್ರಾಣಶಬ್ದ ವಾಚ್ಯನೂ ವಿಷ್ಣುವೇ.

ದಾಸಸಾಹಿತ್ಯ:-

1) ಪ್ರಾಣನ ಪ್ರಾಣನ ಗುಣಗಣಮಂಡಿತ ವೇಣುಗೋಪಾಲವಿಠಲ ಕಲ್ಯಾಣನ ಕೃಷ್ಣನ ನೋಡಿದ ಸರ್ವೋತ್ಕೃಷ್ಣನ ಪಾಡಿದೆ.

2) ಹನುಮ ಪುರಂದರವಿಠಲನದಾಸ । ಪುರಂದರವಿಠಲನೇ ಹನುಮನೊ- ಳ್ವಾಸ ॥ ಹನುಮನ ಮತವೇ ಹರಿಯಮತ.

(ಪುರಂದರದಾಸರು)

-೦-೦-೦-೦-

## ಪ್ರಥಮಾಧ್ಯಾಯ ದ್ವಿತೀಯಪಾದ

### 1. ಸರ್ವಗತ ತತ್ತ್ವಾಧಿಕರಣ

**ಸೂತ್ರಗಳು :-**

1) ಓಂ ಸರ್ವತ್ರ ಪ್ರಸಿದ್ಧೋಪದೇಶಾತ್ ಓಂ ॥ ೧ ॥
2) ಓಂ ವಿವಕ್ಷಿತಗುಣೋಪಪತ್ತೇಶ್ಚ ಓಂ ॥ ೨ ॥
3) ಓಂ ಅನುಪಪತ್ತೇಶ್ಚ ನ ಶಾರೀರಃ ॥ ೩ ॥
4) ಓಂ ಕರ್ಮಕರ್ತೃವ್ಯಪದೇಶಾಚ್ಚ ಓಂ ॥ ೪ ॥
5) ಓಂ ಶಬ್ದವಿಶೇಷಾತ್ ಓಂ ॥ ೫ ॥
6) ಓಂ ಸ್ಮೃತೇಶ್ಚ ಓಂ ॥ ೬ ॥
7) ಓಂ ಅರ್ಭಕೌಕಸ್ತ್ವಾತ್ತದ್ವ್ಯಪದೇಶಾಚ್ಚ ನೇತಿ ಚೇನ್ನ, ನಿಚಾಯ್ಯತ್ವಾದೇವಂ, ವ್ಯೋಮವಚ್ಚ ಓಂ ॥ ೭ ॥
8) ಓಂ ಸಂಭೋಗಪ್ರಾಪ್ತಿರಿತಿ ಚೇನ್ನ, ವೈಶೇಷ್ಯಾತ್ ಓಂ ॥ ೮ ॥

ಆದಿತ್ಯ ಹಾಗೂ ಜೀವರು ಇತ್ಯಾದಿಗಳು ಸರ್ವಗತರಲ್ಲ, "ತದೇವ ಬ್ರಹ್ಮ ಪರಮಂ ಕವೀನಾಂ" ಎಂದಿರೋಣದರಿಂದ ಬ್ರಹ್ಮಶಬ್ದ ವಾಚ್ಯತ್ವವು ವಿಷ್ಣುವಿನಲ್ಲಿಯೇ ಪ್ರಸಿದ್ಧವು. ಆದ್ದರಿಂದ ಪೃಥಿವ್ಯಾದಿಗಳಲ್ಲಿ ಸರ್ವತ್ರ ಹೇಳಲ್ಪಡತಕ್ಕವನು ಸರ್ವಗತನಾದ ವಿಷ್ಣುವೇ ಹೊರತು ಅನ್ಯರಲ್ಲ.

**ದಾಸಸಾಹಿತ್ಯ :-**

ಮುಖ್ಯ ಕಾರಣ ವಿಷ್ಣುವೇ ಸ್ವತಂತ್ರ ॥ ಪ ॥
ಸಖ್ಯರ ಪೋಷ ಶ್ರೀಅಜಭವಾದಿಗಳರಸ ॥ ಅ ॥

ಧ್ವನಿಯ ವರ್ಣೋದಯ ಶಬ್ದ ವಾಚ್ಯನು ನೀನೇ ॥ ಗುಣದೇಶಕಾಲಕರ್ಮಗಳು ನಿನ್ನ.
ತನು ಕರಣ ವಿಷಯ ಮನಜೀವಸ್ವಾಮಿಯು ನೀನೇ ।
ಅಣು ಮಹಜ್ಜಗದ ಬಹಿರಂತರಾತ್ಮಕನೆ ॥ ॥ ೧ ॥

(ಶ್ರೀ ಗೋಪಾಲದಾಸರು)

### 2. ಅತ್ರೃತ್ವಾಧಿಕರಣ

**ಸೂತ್ರ :-** 1. ಓಂ ಅತ್ತಾ, ಚರಾಚರಗ್ರಹಣಾತ್ ಓಂ ॥ ೯ ॥
2. ಓಂ ಪ್ರಕರಣಾಚ್ಚ ಓಂ ॥ ೧೦ ॥

“ಸರ್ವಂಪಾ ಅಸ್ತಿ” ಎಂಬಿರೋಣದರಿಂದ ಸರ್ವಸಂಪರ್ಣತ್ವತ್ತ್ವವು ವಿಷ್ಣುವಿ-ನಲ್ಲಿಯೇ ಪೂರ್ತಾತ್ಮ ಇರಬೇಕಾದ್ದು ಬ್ರಹ್ಮದೇವರಿಗಲ್ಲ.

ದಾಸಸಾಹಿತ್ಯ :–

ಶ ಪ್ರ ಸ್ಥಿತಿ ಲಯ ಕಾರಣಗೋವಿಂದ । ಈ ಪರಿಮಹಿಮೆಯ ತಿಳಿಯೋದೆ ಆ ನಂದ ಗೋವಿಂದನಸ್ವಾನಂದ । ಸಾಧನ ಸಕಲವು ಎಲ್ಲಾ ನಿನ್ನಿಂದ.

[ಶ್ರೀ ಪುರಂದರದಾಸರು]

## 3. ಗುಹಾಧಿಕರಣ

ಸದಸ್ಯ :– 1. ಓಂ ಗುಹಾಂ ಪ್ರವಿಷ್ಟಾವಾತ್ಮಾನೌ ಹಿ, ತದ್ದರ್ಶನಾತ್ ಓಂ || ೧೨ ||

2. ಓಂ ವಿಶೇಷಣಾಚ್ಚ ಓಂ || ೧೩ ||

“ಯೋ ವೇದನಿಹಿತಂ ಗುಹಾಯಾಂ” ಎಂಬ ಶ್ರುತಿಯಂತೆ ಹೃದಯ ಗುಹಾನಿ-ಷ್ಟತ್ವ ಲಿಂಗವು ವಿಷ್ಣುವಿನಲ್ಲಿಯೇ ಕೂಡತಕ್ಕದ್ದು, ಜೀವನು ಪರಮಾತ್ಮನಿಂದ ತ್ವಂತ ಭಿನ್ನನೂ, ಪರಾಧೀನನೂ ಆಗಿರುವುದರಿಂದ ಅವನಲ್ಲಿ ಕೂಡದು ಈಗುಣ.

ದಾಸಸಾಹಿತ್ಯ

1) ಬಾಬಾ ಭಕ್ತರ ಪಾದಸುಮಂದಿರ, ಬಾಬಾ ಜಗದೋದ್ಧಾರ || ಪ ||

(ಶ್ರೀ ವಿಜಯದಾಸರು)

2) ಜನರೊಳಗೆ ನೀನಿದ್ದು, ಜನುಮ ಜನುಮಗಳಲಿ, ಗುಣ, ಕಾಲ ಕ್ರಿಯ ಸ್ವಭಾವಂಗಳನುಸರಿಸಿ ಪುಣ್ಯಪಾಪವ ಮಾಡಿಸುವ ಕರುಣಾಳು ಸ್ವಾಮಿ, ನಿನ್ನ ಸಂಕಲ್ಪಾನುಸಾರ ಮಾಡೋ ||

(ಶ್ರೀ ಜಗನ್ನಾಥದಾಸರು)

## 4. ಅಂತರಾಧಿಕರಣ

ಸೂತ್ರಗಳು :–

1. ಓಂ ಅಂತರಃ, ಉಪಪತ್ತೇಃ ಓಂ || ೧೪ ||
2. ಓಂ ಸ್ಥಾನಾದಿವ್ಯಪದೇಶಾಚ್ಚ ಓಂ || ೧೫ ||
3. ಓಂ ಸುಖ ವಿಶಿಷ್ಟಾಭಿಧಾನಾದೇವ ಚ ಓಂ || ೧೬ ||
4. ಓಂ ಶ್ರುತೋಪನಿಷತ್ಕಗತ್ಯಭಿಧಾನಾಚ್ಚ ಓಂ || ೧೭ ||
5. ಓಂ ಅನವಸ್ಥಿತೇರ ಸಂಭವಾಚ್ಚ ನೇತರಃ ಓಂ || ೧೮ ||

ಆಕ್ಷ್ಯಂತಸ್ಥನಾದ ಅಸ್ತ್ರನು ವಿಷ್ಣುವೇಹೊರತು ಅಗ್ನಿಯಲ್ಲ. ಏಕೆಂದರೆ ಅಗ್ನಿಗೆ ಪ್ರತಿಭಯಾಧಿಗಳುಂಟು. ಅಗ್ನ್ಯಂತರ್ಗತ ವಿಷ್ಣುವೇ ಮುಖ್ಯ ಲಿಂಗನು. ಆವನಿಲ್ಲದೇ ಇವನಿಲ್ಲ.

**ದಾಸಸಾಹಿತ್ಯ :–**

1) ಆನಲಾಂಗಾರದೊಳಿಪ್ಪೊಪಾದಿಲಿ । ಆನಿರುದ್ಧರು ಚೇತನದೊಳಗ ಕ್ಷಣ ಬಿಟ್ಟಗಲದೇ ಏಕೋ ನಾರಾಯಣ ಶ್ರುತಿ ಪ್ರತಿಪಾದ್ಯನು ಇವನೆಂಬುದ........ಫಲ ವಿದು ಬಾಳ್ವುದಕೆ.

2) ಕಾರಣ ಕಾರ್ಯಾಂತರ್ಗತ ಅಂಶವ । ತಾರಾವೇಶ ವಿಹಿತ ಸಹಜ. ಪ್ರೇರಕ ಪ್ರೇರ್ಯಾಪ್ಪಯ ಸರ್ವತ್ರ ವಿ- । ಕಾರವಿಲ್ಲದಲಿ ತೋರುವನೆಂಬುದ.......ಫಲವಿದು ಬಾಳ್ವುದಕೆ.

[ಶ್ರೀ ಜಗನ್ನಾಥದಾಸರು]

## 5. ಅಂತರ್ಯಾಮ್ಯಧಿಕರಣ

**ಸೂತ್ರಗಳು :–**

**1) ಓಂ ಅಂತರ್ಯಾಮ್ಯಧಿದೈವಾದಿಷು, ತದ್ಧರ್ಮ- ವ್ಯಪದೇಶಾತ್ ಓಂ || ೧೮ ||**

**2) ಓಂ ನಚ್ಚಸ್ಮಾರ್ತಮತದ್ಧರ್ಮಾಭಿಲಾಪಾತ್ ಓಂ || ೧೯ ||**

**3) ಓಂ ಶಾರೀರಶ್ಚೋಭಯೋಽಪಿ ಹಿ ಭೇದೇನೈನ ಮಧೀಯತೇ ಓಂ || ೨೦ ||**

ಅಂತರ್ಯಾಮಿಯು ಪ್ರಕೃತಿಯೋ, ಜೀವನೋ, ವಿಷ್ಣುವೋ ಎಂಬ ಶಂಕೆ ಬಂದರೆ ಪರಮ ಶ್ರೇಯೋರೂಪನಾದ ವಿಷ್ಣುವಿನಲ್ಲೇ ಸಮನ್ವಯವಾಗುತ್ತಲಿದೆ. ಏಕೆಂದರೆ ಪ್ರಕೃತಿ ಹಾಗೂ ಜೀವರಿಗೆ ಆಸಾಧಾರಣ ಸಾಮರ್ಥ್ಯ ಕೊಡದ ಕಾರಣ.

**ದಾಸಸಾಹಿತ್ಯ :–**

ತಿಳಿವೆಂಬುವ ನೀನೆ, ತಿಳಿದು ತಿಳಿಸುವ ನೀನೆ
ತಿಳಿದ ವಸ್ತುವೂ ನೀನೆ, ತೀರ್ಥ ಪದನೆ
ತಿಳಿದುದಕ್ಕೆ ಫಲನೀನೆ, ತಿಳಿಯಗೊಡದವನೀನೆ.
ತಿಳಿವ ಸ್ವತಂತ್ರ ನಿನ್ನದು ತಿಳಿಸೋ ಸರ್ವೇಶ ॥

**(ಶ್ರೀ ಗೋಪಾಲದಾಸರು)**

## 6· ಅಧೃಶ್ಯತ್ವಾಧಿಕರಣ

ಸುತ್ರಗಳು :–

1) ಓಂ ಅದೃಶ್ಯತ್ವಾದಿಗುಣಕೋಧರ್ಮೋಕ್ತೇಃ ಓಂ || ೨೧ ||

2) ಓಂ ವಿಶೇಷಣಬೇದವ್ಯಪದೇಶಾಭ್ಯಾಂ ಚ ನೇತತಾ ಓಂ || ೨೨ ||

3) ಓಂ ರೂಪೋಪನ್ಯಾಸಾಚ್ಚ ಓಂ || ೨೩ ||

ಜಗತ್ತಿಗೆ ಕಾರಣವಾದ ಅಕ್ಷರವು ಬ್ರಹ್ಮ, ರುದ್ರ, ವಿಷ್ಣು ಯಾರಲ್ಲೆಂಬ ಸಂದೇಹ ಬಂದಾಗ ಅದು ವಿಷ್ಣುವಿನಲ್ಲಿಯೇ ಎಂದು ಸ್ಥಿರ ಪಟ್ಟಿದೆ. ಏಕೆಂದರೆ ಪರಬ್ರಹ್ಮ ವಿಷಯತ್ವವು ವಿಷ್ಣುವಿನಲ್ಲಿ ಮಾತ್ರ ಇರತಕ್ಕದು ಇತರರಿಗಲ್ಲ.

ದಾಸಸಾಹಿತ್ಯ :–

ಪರಿಮಳವು ಸುಮನದೊಳಗಿಪ್ಪಂತೆ<br>
ಅರಣಿಯೊಳಗಿಪ್ಪಂತೆ ಪಾವಕ<br>
ಪರಮ ಬ್ರಹ್ಮಾದಿಗಳ ಮನದಲಿ ತೋರಿ ತೋರದಲೆ ।<br>
ಇರುತಿಹ ಜಗನ್ನಾಥವಿಠಲನ<br>
ಕರುಣ ಪಡೆದ ಮುಮುಕ್ಷುಜೀವರು<br>
ಪರಮಭಾಗವತರನು ಕೊಂಡಾಡುವುದು ಪ್ರತಿದಿನವೂ ॥

(ಶ್ರೀಹರಿಕಥಾಮೃತಸಾರ)

## 7. ವೈಶ್ವನಾಧಿಕರಣ

ಸೂತ್ರಗಳು :–

1. ಓಂ ವೈಶ್ವನರಃ, ಸಾಧಾರಣಶಬ್ದವಿಶೇಷಾತ್ ಓಂ || ೨೪ ||
2. ಓಂ ಸ್ಮರ್ಯಮಾಣಮನುಮಾನಂ ಸ್ಯಾದಿತಿ ಓಂ || ೨೫ ||
3. ಓಂ ಶಬ್ದಾದಿಭ್ಯೋಃ ಅಂತಃ ಪ್ರತಿಷ್ಠಾನಾನ್ನೇತಿ ಚೇನ್ನ ತಥಾದೃಷ್ಟ್ಯುಪದೇಶಾತ್, ಅಸಂಭವಾತ್ಪುರುಷ ವಿಧಮಪಿ ಚೈನಮಧೀಯತೆ ಓಂ || ೨೬ ||
4. ಓಂ ಅತ ಏವ ನ ದೇವತಾ ಭೂತಂ ಚ ಓಂ || ೨೭ ||
5. ಓಂ ಸಾಕ್ಷಾದಪ್ಯವಿರೋಧಂ ಜೈಮನಿಃ ಓಂ || ೨೮ ||
6. ಓಂ ಅಭಿವ್ಯಕ್ತೇರಿತ್ಯಾಶ್ಮರಥ್ಯಃ ಓಂ || ೨೯ ||
7. ಓಂ ಅನುಸ್ಮೃತೇರ್ಬಾದರಿಃ ಓಂ || ೩೯ ||
8. ಓಂ ಸಂಪತ್ತೇರಿತಿ ಜೈಮಿನಿಸ್ತಥಾ ಹಿ ದರ್ಶಯತಿ ಓಂ || ೩೦ ||
9. ಓಂ ಆಮನಂತಿ ಚೈನಮಸ್ಮಿನ್ ಓಂ || ೩೨ ||

ವೈಶ್ವಾನರನು ಭೂತಾಗ್ನಿಯೋ, ಭೂತಾಭಿಮಾನಿ ದೇವತೆಯೋ, ವಿಷ್ಣುವೋ ಎಂಬ ಸಂದೇಹ ಬಂದರೆ ವೈಶ್ವಾನರನು ವಿಷ್ಣುವೇ ಎಂದು ಸಿದ್ಧಾಂತವು. ಅಜ್ಞಾನಿ-ಗಳು ಅನ್ಯತ್ರ ಶಬ್ದದಲ್ಲಿಯೇ ಪದ ಪ್ರಯೋಗಿಸುವವರು. ಆದರೆ ಜ್ಞಾನಿಗಳು ಎಲ್ಲಾ ಶಬ್ದಗಳನ್ನೂ ಪರಬ್ರಹ್ಮನಲ್ಲೇ ಮುಖ್ಯ ವೃತ್ತಿಯಿಂದ ಪ್ರಯೋಗಿಸುವರು. ಪುರುಷ-ಸೂಕ್ತಾದಿಗಳು ವಿಷ್ಣುವನ್ನೇ ತಿಳಿಸುತ್ತಲಿದೆ. ಆದ್ದರಿಂದ ವೈಶ್ವಾನರನು ವಿಷ್ಣುವೇ ಎಂದು ಸಿದ್ಧಾಂತ.

**ದಾಸಸಾಹಿತ್ಯ :–**

ಸಾವಧಾನದಿ ತಂತ್ರಸಾರೋಕ್ತವಿಧಿಯಿಂದ । ದೇವಪೂಜೆಯಮಾಡಿ ದೇವೇ-ಶಗೆ । ನೈವೇದ್ಯಗಳನ್ನಿತ್ತು ನಿತ್ಯ ತೃಪ್ತಗೆ ವೈಶ್ವದೇವ । ಬಲಿ ಹರಣ ಅತಿಥಿಪೂಜೆಯು ಮಾಡುತ್ತಾ ॥ ದಿನಗಳನು ಕಳೆವ ಜನರೇ ಸುಜನರು.

[ಶ್ರೀ ವಾದಿರಾಜರು]

-o—o- o—o--

## ಪ್ರಥಮಾಧ್ಯಾಯ ತೃತೀಯಪಾದ

### 1. ದ್ಯುಭ್ವಾದ್ಯಧಿಕರಣ

**ಸೂತ್ರಗಳು :–**

1. ಓಂ ದ್ಯುಭ್ವಾದ್ಯಾಯತನಂ, ಸ್ವಶಬ್ದಾತ್ ಓಂ ॥ ೧ ॥
2. ಓಂ ಮುಕ್ತೋಪಸೃಪ್ಯವ್ಯಪದೇಶಾತ್ ಓಂ ॥ ೨ ॥
3. ಓಂ ನಾನುಮಾನಂ, ಅತಚ್ಛಬ್ದಾತ್ ಓಂ ॥ ೩ ॥
4. ಓಂ ಪ್ರಾಣಭೃಚ್ಚ ಓಂ ॥ ೪ ॥
5. ಓಂ ಭೇದವ್ಯಪದೇಶಾತ್ ಓಂ ॥ ೫ ॥
6. ಓಂ ಪ್ರಕರಣಾತ್ ಓಂ ॥ ೬ ॥
7. ಓಂ ಸ್ಥಿತ್ಯದನಾಭ್ಯಾಂ ಚ ಓಂ ॥ ೭ ॥

ದ್ಯುಭ್ವಾದ್ಯಾಯತನಂ ಅಂದರೆ ಸ್ವರ್ಗ ಭೂಮಿ ಮೊದಲಾದ ಎಲ್ಲಾ ವಸ್ತು-ಗಳಿಗೂ ಆಶ್ರಯನಾದವನು ತತ್ತು ಅಂದರೆ ಆ ವಿಷ್ಣುವೇ ಎಂದು ಸಮರ್ಥಿಸಿರುತ್ತಾರೆ. ಆ ಶ್ರೀಹರಿಯೇ ಮುಕ್ತರಿಗೂ ಆಶ್ರಯನು. ಪಾಶುಪತಾದ್ಯಾಗಮದಿಂದ ಪ್ರತಿಪಾದ್ಯ-ರಾದ ರುದ್ರಾದಿಗಳಲ್ಲ. ಇದಕ್ಕೆ ಜೀವವಾಯುಗಳೂ ವಾಚ್ಯರಲ್ಲ. ದ್ವಾಸುಪರ್ಣ

ಇತ್ಯಾದಿ ಶ್ರುತಿಗಳಲ್ಲಿ ಜೀವ ಪರಮಾತ್ಮಭೇದ ಹೇಳುವುದರಿಂದ ವ್ಯಾಖ್ಯಾದ್ಯಾಯತ್ವ ವಿಷ್ಣುವಿಗೇ ಕೂಡುವುದು.

**ದಾಸಸಾಹಿತ್ಯ :-**

1) ಅಜನು ಸ್ತುತಿಯಮಾಡೆ, ಗಜಗುಣಾಧಿಪ ಪಾಡೆ, ಗಜಮುಖನಯ್ಯನು ಸಜಾನಂದದಲಾಡೆ ಭುಜಗಶ್ರೇಷ್ಠ ದ್ವಿಜರಾಜರುಜಯವೆನ್ನೆ. ಕುಜನರೆದೆಯ ಮೆಟ್ಟಿ ರಜತವು ಕೆಳಿಯುತಾ. ನಡೆದುಬಾರಯ್ಯ ನೀನು ವೇಂಕಟ.

**(ಶ್ರೀ ಜಗನ್ನಾಥದಾಸರು)**

2) ಜಯವದೆ. ಜಯವದೆ ಈಮನತನಕೆ ಎಂಬ ಪುರಂದರದಾಸರ ಕೃತಿಯಲ್ಲಿ ದ್ವಾಸುಪರ್ಣಾ ಶ್ರುತಿ ವರ್ಣಿತವಾಗಿದೆ.

**ಸೂತ್ರಗಳು :-**

**1. ಓಂ ಭೂಮಾ, ಸಂಪ್ರದಾಯಾತ್ ಧ್ಯುಪದೇಶಾತ್ ಓಂ || ೮ ||**

**2. ಓಂ ಧರ್ಮೋಪಪತ್ತೇಶ್ಚ ಓಂ || ೯ ||**

ಭೂಮ ಶಬ್ದ ವಾಚ್ಯನು ಮುಖ್ಯಪ್ರಾಣನೋ, ವಿಷ್ಣುವೋ. ಎಂಬಶಂಕೆ ಬಂದರೆ ಭೂಮಶಬ್ದ ವಾಚ್ಯನು ವಿಷ್ಣುವೇ ಎಂದು ನಿರ್ಧರಿಸಲಾಗಿದೆ. "ಭೂಮವಾದ ಪ್ರಾಣದಜ್ಯಾಯಾನ್" ಎಂದಿರೋಣದರಿಂದ ಭೂಮನಾದ ವಿಷ್ಣು, ಪ್ರಾಣನಿಗಿಂತ ಶ್ರೇಷ್ಠ ಎಂದಾಯಿತು.

**ದಾಸಸಾಹಿತ್ಯ :-**

ಪ್ರಾಣಪತಿಯ ಹೃದಯಾಬ್ಜ ಮಂಟಪಸ್ಥಾನದಲ್ಲಿ ಭಿವಾಪ್ತ ಚಿನ್ಮಯ ಧ್ಯಾನ ಗೋಚರನಾಗಿ ಕಣ್ಣಿಗ ಕಾಣಿಸುತ ಶ್ರೀರಂಗವಿಠಲ ಬಾರೋ ಮನೆಗೆ ಗೋವಿಂದ.

**[ಶ್ರೀ ಶ್ರೀಪಾದರಾಜರು]**

## ೩. ಅಕ್ಷರಾಧಿಕರಣ

**ಸೂತ್ರಗಳು :-**

**1. ಓಂ ಅಕ್ಷರಮಂಬರಾಂತಧೃತೇಃ ಓಂ || ೧೦ ||**

**2. ಓಂ ಸೂ ಚ ಪ್ರಶಾಸನಾತ್ ಓಂ || ೧೧ ||**

**3. ಓಂ ಅನ್ಯಭಾವವ್ಯಾವೃತ್ತೇಶ್ಚ || ೧೨ ||**

ಅಕ್ಷರ ಶಬ್ದ ವಾಚ್ಯನು ಬ್ರಹ್ಮ ಅಂದರೆ ವಿಷ್ಣುವೇ ಎಂಬುದು ಸಿದ್ಧಾಂತ. ಅವನನು ಅಚಿಂತ್ಯ ಶಕ್ತಿಯುದಾದ ಅಣುಮಹತ್ ಆಗುವುದು. "ಅಣೋರಣೀಯಾನ್ ಮಹತೋ ಮಹೀಯಾನ್" ಎಂಬುವ ಆಗಮರೀತ್ಯ.

**ದಾಸಸಾಹಿತ್ಯ :-**

1) ಪುರುಷರೂಪತ್ರಯ ಪುರಾತನ
ಪುರುಷ ಪುರುಷೋತ್ತಮ ಕ್ಷರಾಕ್ಷರ
ಪುರುಷ ಪೂಜಿತಪಾದ ಪೂರ್ಣಾನಂದ ಜ್ಞಾನಮಯ ।
ಪುರುಷಸೂಕ್ತ ಸಮೇಯ ತಕ್ಷ
ತ್ಪುರುಷ ಪುತ್ರಪುಷ್ಕರ ನಿಲಯ ಮಹ-
ಪುರುಷ ಜಾಂಡಾಂತರದಿ ಬಹಿರದಿ ವ್ಯಾಪ್ತ ನಿರ್ಲಿಪ್ತ ॥

[ಶ್ರೀ ಹರಿಕಥಾಮೃತಸಾರ]

ಅಣುವಾಗಬಲ್ಲ ಮಹತ್ತಾಗಬಲ್ಲ, ಅಣುಮಹತ್ ಎರಡೊಂದಾಗ ಬಲ್ಲ, ವ್ಯಕ್ತನಾ-ಗಬಲ್ಲ, ವ್ಯಕ್ತನಾಗಬಲ್ಲ, ವ್ಯಕ್ತವ್ಯಕ್ತ ಎರಡೊಂದಾಗಬಲ್ಲ.........,ಅಗಟನಾ-ಘಟನ ಮಹಿಮ ನಮ್ಮ ಪುರಂದರವಿಠಲ.

[ಪುರಂದರದಾಸರು]

## 4. ಸದಧಿಕರಣ

**ಸೂತ್ರಗಳು :-**

**ಓಂ ಈಕ್ಷತಿಕರ್ಮ ವ್ಯಪದೇಶಾತ್ಸಃ ಓಂ** ॥೧.೩॥

ತದೈಕ್ಷತ ಎನ್ನುವ ಶ್ರುತಿಯನ್ನು ಈಕ್ಷಣಾಖ್ಯ ವ್ಯಾಪಾರ ಕರ್ತೃತ್ವವು ಸತ್ ಶಬ್ದದಿಂದ ಹೇಳಲ್ಪಡುವ ವಿಷ್ಣುವೇ ಪ್ರಧಾನ.

**ದಾಸ ಸಾಹಿತ್ಯ :-**

ಸೃಷ್ಟ್ಯಾದಿ ಕರ್ತ ತ್ರಿಜಗದ್ಭರ್ತ। ಲೋಕೈಕ ಸಮರ್ಥ
ವೃಷ್ಟೀಶ ವೃಂದಾರಕ ರಿಪುಹರ್ತ।ಮುಕುತರಪುರುಷಾರ್ಥ
ಹೃಷ್ಟ ಪುಷ್ಟ ಪರಮೇಷ್ಟಿಜನಕ।ಶಿಷ್ಟೇಷ್ಟ ದ್ರಷ್ಟ ಅನಿದಿಷ್ಟ ನಿಪಿಷ್ಟ ॥
ಬಾ ವೇಂಕಟ ಶೈಲಾಧಿಪ ಮನ್ಮನಕೆ.

[ಶ್ರೀ ಜಗನ್ನಾಥದಾಸರು]

## 5. ದಹರಾಧಿಕರಣ

**ಸೂತ್ರಗಳು :-**

1. **ಓಂ ದಹರ ಉತ್ತರೇಭ್ಯಃ ಓಂ**
2. **ಓಂ ಗತಿ ಶಬ್ದಾಭ್ಯಾಂ, ತಥಾಹಿ ದೃಷ್ಟಂ, ಲಿಂಗಂಚ ಓಂ** ॥ ೧.೫ ॥
3. **ಓಂ ಧೃತೇಶ್ಚ ಮಹಿನ್ನೋಽಸ್ಯಾಸ್ಮಿನು ಪಲಬ್ಧೇಃ ಓಂ** ॥ ೧.೬ ॥

4. ಓಂ ಪ್ರಸಿದ್ಧೇಶ್ಚ ಓಂ || ೧೭ ||

5. ಓಂ ಇತರ ಪರಾಮರ್ಶಾತ್ಸ ಇತಿ ಚೇನ್ನ
ಅಸಂಭವಾತ್ ಓಂ || ೧೮ ||

6. ಓಂ ಉತ್ತರಾಚ್ಚೇದಾ ವಿರ್ಭೂತ ಸ್ವರೂಪಸ್ತು ಓಂ || ೧೯ ||

7. ಓಂ ಅನ್ಯಾರ್ಥಶ್ಚ ಪರಾಮರ್ಶಃ ಓಂ || ೨೦ ||

8. ಓಂ ಅಲ್ಪಶ್ರುತಿರಿತಿ ಚೇತ್ತ ದುಕ್ತಂ ಓಂ || ೨೧ ||

ಸರ್ವರ ಹೃದಯದಲ್ಲಿರುವ ಜಿಜ್ಞಾಸ ವೇದ್ಯನು ವಿಷ್ಣುವೇ (ವಿಷ್ಣೋರೇವ) ಇತರರಲ್ಲ. ಹೃತ್ವದ್ಮಸ್ಥತ್ವವು ವಿಷ್ಣುವಿಗೊಬ್ಬನಿಗೆ ಕೊಡುವುದು.

**ದಾಸಸಾಹಿತ್ಯ :-**

ಎಲ್ಲರೊಳು ತಾನಿಪ್ಪ ತನ್ನೊಳ -
ಗೆಲ್ಲರನು ಧರಿಸಿಹನು ಅಪ್ರತಿಮ
ಮಲ್ಲ ಮನ್ಮಥ ಜನಕ ಜಗದಾದ್ಯಂತ ಮಧ್ಯಗಳ
ಬಲ್ಲ ಬಹು ಗುಣ ಭರಿತ ದಾನವ-
ದಲ್ಲಣ ಜಗನ್ನಾಥವಿಠಲನು
ಸೊಲ್ಲ ಲಾಸ್ತಲಿಸಿ ಕಂಬದಿಂದಲಿ ಬಂದ ಭಕ್ತನಿಗೆ.

[ಹರಿಕಥಾಮೃತಸಾರ]

ಬಾಬಾ ಭಕ್ತರ ಹೃದಯ ಮಂದಿರ
ಬಾಬಾ ಜಗದೋದ್ಧಾರ ಬಾಬಾ ವೆಂಕಟಾಚಲ ವಿಹಾರ

[ಶ್ರೀ ವಿಜಯದಾಸರು]

## ಅನುಕೃತ್ಯಧಿಕರಣ

**ಸೂತ್ರಗಳು :-**

1. ಓಂ ಅನುಕೃತೇಸ್ತಸ್ಯ ಚ ಓಂ || ೨೨ ||

2. ಓಂ ಅಪಿಸ್ಮರ್ಯತೇ ಓಂ || ೨೩ ||

ಸೂರ್ಯನ ಪ್ರಕಾಶ ಶ್ರೀಹರಿಯ ಪ್ರಕಾಶದಿಂದಲೇ, ಸರ್ವ ಜಗತ್ತಿನ ಪ್ರಕಾಶಕ್ಕೂ ಶ್ರೀಹರಿಯೇ ಮೂಲ. ಸೂರ್ಯ ಚಂದ್ರ ಅಗ್ನಿಯರಲ್ಲಿರುವ ತೇಜಸ್ಸು ಶ್ರೀವಿಷ್ಣುವಿನ ಅಧೀನ.

**ದಾಸಸಾಹಿತ್ಯ :-**

ಬ್ರಹ್ಮನಿಗೆ ಶ್ರೀರಂಗಮೂರುತಿ, ರುದ್ರನಿಗೆ ನರಸಿಂಹ ಮೂರುತಿ, ಇಂದ್ರನಿಗೆ ಉಪೇಂದ್ರಮೂರುತಿ, ಚಂದ್ರನಿಗೆ ದಧಿವಾಮನ ಮೂರುತಿ, ಸೂರ್ಯಗೆ ನಾರಾಯಣ ಮೂರುತಿ, ಆಧಾರವಾಗಿಪ್ಪವೊ.....

[ಶ್ರೀ ಪುರಂದರದಾಸರು]

## 7. ವಾಮನಧಿಕ್ಕಾರಣ

**ಸೂತ್ರಗಳು :-**

1. ಓಂ ಶಬ್ದಾದೇವ ಪ್ರಮಿತಃ ಓಂ || ೨೪ ||
2. ಓಂ ಹೃದ್ಯಪೇಕ್ಷಯಾತು ಮನುಷ್ಯಾಧಿಕಾರತ್ವಾತ್ ಓಂ || ೨೫ ||

ಸರ್ವದೇವತೆಗಳ ಔಪಾಸ್ಯಮೂರುತಿ ಸರ್ವರ ಹೃದಯಸ್ತನಾದ ವಾಮನನಾದ ಶ್ರೀಹರಿ. ಅವನೇ"ವಿಷ್ಣುರೇವ ಜಿಜ್ಞಾಸ್ಯ" ಎನಿಸಿದ್ದಾನೆ. ಸರ್ವಗತ ವಿಷ್ಣುವಿಗೆ "ಅಂಗುಷ್ಠಮಾತ್ರ: ಪುರುಷಃ" ಎಂದಿರೋಣದರಿಂದ ಹೃದಯದಲ್ಲಿ ಅಂಗುಷ್ಟಮಾತ್ರ ದಿಂದ ಔಪಾಸನೆಗೆ ಸಿಗುವನು ಶ್ರೀಹರಿಯು.

**ದಾಸಸಾಹಿತ್ಯ:-**

ಬಿಂಬ ಭಾವಕ್ರಿಯ ದ್ರವ್ಯಾದ್ವೈತವನು | ತಿಳಿದು ಸರ್ವಗತ । ಬಿಂಬನೆ ಮಮಸ್ವಾಮಿ ಗೋಪಾಲ ವಿಠಲ । ನಲ್ಲದಿನ್ನಿಲ್ಲ ಎಂಬೋದರಿತು ಅನ್ಯಸ್ವತಂತ್ರವ ಮರೆತು ಸರ್ವವ್ಯಾಪಾರ ಬಿಂಬಕ್ರಿಯುವಕಾಣೋತನಕ|ಹೇ ಪ್ರಾಣಿ ನಿನ್ನ ಭ್ರಾಂತಿ ಬಿಡದೋ | ಭಾಗ್ಯ ಪುರುಷನೆ ||

## 8. ದೇವತಾಧಿಕರಣ

**ಸೂತ್ರಗಳು :-**

1. ಓಂ ತದುಪರ್ಯಪಿ ಬಾದರಾಯಣಃ ಸಂಭವಾತ್ ಓಂ || ೨೬ ||
2. ಓಂ ವಿರೋಧಃ ಕರ್ಮಣೀತಿ ಚೆನ್ನ ಅನೇಕ ಪ್ರತಿಪತ್ತೇಃ ದರ್ಶನಾತ್ ಓಂ || ೨೭ ||
3. ಓಂ ಶಬ್ಧ ಇತಿ ಚೆನ್ನಾತಃ ಪ್ರಭವಾತ್ಪ್ರತ್ಯಕ್ಷಾನು ಮಾಭ್ಯಾಂ ಓಂ || ೨೮ ||
4. ಓಂ ಅತ ಏವ ಚನಿತ್ಯತ್ವಂ ಓಂ || ೨೯ ||
5. ಓಂ ಸಮಾನನಾಮರೂಪತ್ವಾಚ್ಚ, ಅವೃತ್ತಾವ್ಯಪ ವಿರೋಧಃ ದರ್ಶನಾತ್ ಸ್ಮೃತೇಶ್ಚ ಓಂ || ೩೦ ||

6. ಓಂ ಮಧ್ವಾದಿಷ್ವ ಸಂಭವಾದನಧಿಕಾರಂ ಜೈಮಿನಿಃ ಓಂ || ೩೧ ||

7. ಓಂ ಜೋತಿಷಿ ಭಾವಾಚ್ಚ ಓಂ || ೩೨ ||

8. ಓಂ ಭಾವಂ ತು ಬಾದರಾಯಣಃ ಅಸ್ತಿ ಹಿ ಓಂ || ೩೩ ||

ವೇದಾವಿದ್ಯಾತಿಕಾರವ ಮನುಷ್ಯರಿಗೆಮಾತ್ರವಲ್ಲ ದೇವತೆಗಳಿಗೂ ಬ್ರಹ್ಮವಿದ್ಯಾಧಿಕಾರ ವುಂಟು ಎಂದು ಸಮರ್ಥಿಸುತ್ತಲಿದೆ

ದಾಸಸಾಹಿತ್ಯ :-

ಅವರವರಯೋಗ್ಯತೆಯನ್ನರಿತು ಪ್ರೇರಕನಾಗಿ ಅವರಿಂದ ಕಾರ್ಯವೆಸಗಿ ಅವರಿ-ಗೊಲಿವೆ ನಮ್ಮ ಅವನೀಶ ಪುರಂದರವಿಠಲ ತವ ದಯವೇ ಸಾಧನವೊ.

[ಶ್ರೀ ಪುರಂದರದಾಸರು[

## 9. ಅಪ ಶೂದ್ರಾಧಿಕರಣ

ಸೂತ್ರಗಳು :-

1. ಓಂ ಶುಗಸ್ಯತದನಾದರಶ್ರವಣಾತ್ತದಾದ್ರವಣಾತ್ ಸೂಚ್ಯತೇ ಹಿ ಓಂ || ೩೪ ||

2. ಓಂ ಕ್ಷತ್ರಿಯತ್ವಾಗತೇಶ್ಚ, ಉತ್ತರತ್ರ ಚೈತ್ರರಥೇನ ಲಿಂಗಾತ್ ಓಂ || ೩೫ ||

3. ಓಂ ಸಂಸ್ಕಾರ ಪರಾಮರ್ಶಾತ್ ತದಭಾವಾಭಿಲಾಪಾಚ್ಚ ಓಂ ||೩೬||

4. ಓಂ ತದಭಾವ ನಿರ್ಧಾರಣೇ ಚ ಪ್ರವೃತ್ತೇಃ ಓಂ || ೩೭ ||

5. ಓಂ ಶ್ರವಣಾಧ್ಯಯನಾರ್ಥ ಪ್ರತಿಷೇಧಾತ್ ಸ್ಮೃತೇಶ್ಚ ಓಂ || ೩೮ ||

ಶೂದ್ರನಿಗೆ ಉಪನಯನಾದಿ ಸಂಸ್ಕಾವಿಲ್ಲದಿರುವುದರಿಂದ ವೇದವಿಧ್ಯೆಯಲ್ಲಿ ಅಧಿಕಾರವಿಲ್ಲ ವಿದುರಾದಿಗಳಿಗೆ ಜನ್ಮಾಂತರದಲ್ಲಿ ಜ್ಞಾನ ಸಾಧನೆ ಆಗಿದ್ದರಿಂದ ವೈಲಕ್ಷಣವಿದೆ.

ದಾಸಸಾಹಿತ್ಯ :-

1) ಶೂದ್ರನಿಗೆತಕ್ಕ ಬ್ರಾಹ್ಮಣ ಕರ್ಮ-------

2) ಮೂದಿಗರಮನೆಯದುವೆಯಾದರೆ ಏನು------

[ಶ್ರೀ ಪುರಂದರದಾಸರು]

**ಸೂತ್ರಗಳು :-**

**ಓಂ ಕಂಪನಾತ್ ಓಂ** || ೩೯ ||

ಇದರಲ್ಲಿ ವಜ್ರನಾಮಕ್ಕೆ ಸಮನ್ವಯ ಮಾಡತ್ತಾ ವಜ್ರ ಎಂದರೆ ಇಂದ್ರನ ವಜ್ರಾಯುಧವೋ ವಿಷ್ಣುವೋ ಎಂಬ ಶಂಕೆ ಬಂದರೆ 'ಆಯುಧಾನಾಮಹಂ ವಜ್ರಂ. ಎನ್ನುವ ಪ್ರಯೋಗದಿಂದ ಅದು ಶ್ರೀವಿಷ್ಣುವಿನಲ್ಲಿ ಇರತಕ್ಕದ್ದೇ. ಚೇಷ್ಟಕ ಪ್ರಾಣನಾದಾಗ್ಯೂ ಅವನ ಪ್ರಾಣ ಶ್ರೀಹರಿ ಇದ್ದಂತೆ.

**ದಾಸಸಾಹಿತ್ಯ :-**

1. ಅಕಾರದಾವಕ್ಷಕಾರ ಪರಿಯಂತ ಎಲ್ಲಾ ಹರಿನಾಮ ಎಂದವಗೆ ಆನಂದ

**(ಶ್ರೀ ವಿಜಯದಸರು)**

2. ಪ್ರಾಣನ ಪ್ರಾಣ ಗುಣಗಣ ಮಂಡಿತ ವೇಣುಗೋಪಾಲವಿಠಲ ಕಲ್ಯಾಣ ಕೃಷ್ಣನ ನೋಡಿದೆ ಸರ್ವೋತ್ಕೃಷ್ಣನ ಪಾಡಿದೆ.

**[ಶ್ರೀ ವೇಣುಗೋಪಾಲ ವಿಠಲರು]**

## 11. ಜೋತಿರಧಿಕರಣ

**ಸೂತ್ರ:- ಓಂ ಜೋತಿರ್ದರ್ಶನಾತ್ ಓಂ** || ೪೦ ||

ವಿಷ್ಣುರೇವ ಜ್ಯೋತಿ ಇತ್ಯಾದಿ ಚತುರ್ವೇದ ಶಿಲಾದಲ್ಲಿರುವುದರಿಂದ ಜ್ಯೋತಿ ಶಬ್ದವಾಚ್ಯ ವಿಷ್ಣುವೆ ಇತರ ಜೀವರಲ್ಲಿ

ಜ್ಯೋತಿಯೊಳಗಿಪ್ಪನು ಕಪಿಲ ಪುರು-
ಹೂತಮುಖದಿಕ್ಪತಿಗಳಿಂದ ಸ-
ಮೇತನಾಗಿಹ ದಕ್ಷಿಣಾಕ್ಷಿಯ ಮುಖದೊಳಿ ವಿಶ್ವ
ಶ್ವೇತ ವರ್ಣ ಚತುರ್ಭುಜನು ಸಂ
ಪ್ರೀತಿಯಿಂದಲಿ ಸ್ಥೂಲ ವಿಷಯವ
ಚೇತನರಿಗುಂಡುಣಿಪಜಾಗ್ರತೆಯಿತ್ತು ಸ್ವಗಜಾಷ್ಯ

**[ಶ್ರೀ ಹರಿಕಥಾಮೃತಸಾರ]**

## 12. ಆಕಾಶಾಧಿಕರಣ

**ಸೂತ್ರ:- ಓಂ ಆಕಾಶೋsರ್ಥಾಂತರತ್ವಾದಿವ್ಯಪದೇಶಾತ್ ಓಂ || ೪೧ ||**

ಆಕಾಶ ಶಬ್ದವಾಚ್ಯನು ಶ್ರೀಹರಿಯೇ

ದಾಸಸಾಹಿತ್ಯ :-

ನೀ ಸಲ ಸಜ್ಜನರ ವೇದವ್ಯಾಸ ಕರುಣಾಪಾತ್ರ ಮಹದಾಕಾಶಪತಿ ಕರುಣಾಳು ಕೈವಿಡಿದೆಮ್ಮ ಉದ್ಧರಿಸೋ

**[ಶ್ರೀ ಹರಿಕಥಾಮೃತಸಾರ]**

## 13. ಸುಷುಪ್ತ್ಯಧಿಕರಣ

**ಸೂತ್ರಗಳು :–**

**ಓಂ ಸುಷುಪ್ತ್ಯುತ್ಕ್ರಾಂತ್ಯೋರ್ಭೇದೇನ ಓಂ** || ೪೨ ||

ಸುಷುಪ್ತಿ ಉತ್ಕ್ರಾಂತಿ ಪ್ರಕರಣದಲ್ಲಿ ಜೀವೇಶ ಭೇದ ಹೇಳಿರೋಣದಿಂದ ಸ್ವಪ್ನಾದ್ರಷ್ಟನು ವಿಷ್ಣುವೇ ಹೊರತು ಅನ್ಯರಲ್ಲ.

**ದಾಸ ಸಾಹಿತ್ಯ :–**

ವಿಶ್ವ ತೈಜಸ ಪ್ರಾಜ್ಞ ತುರ್ಯಾತ್ಮ ಅಂತರಾತುಮ ಪರಮಾತ್ಮ ಜ್ಞಾನಾತ್ಮ | ವಿಶ್ವತೋ ಮುಖ ಗುಣ ಗಣಭೌಮಸಂತತಸಾಮ । ವಂದ್ಯನೇ ಸಾರ್ವಭೌಮ | ಪಿಶ್ವನಾಟಕ ಋಗ್ಯಜುಸ್ಸಾಮ ಆಗಮ ಸ್ತೋಮ| ಪ್ರತಿಪಾದ್ಯ ತ್ರಿಧಾಮ ವಿಶ್ವಾಸದಿಂದಲಿ ತವ ನಾಮ ಭಜನೇಯ ಕಾಮ ಎನಗೀಯೋಶ್ರೀರಾಮ॥

(ಗುರು ಗೋಪಾಲದಾಸರು)

## 14. ಬ್ರಾಹ್ಮಣಾಧಿಕರಣ

**ಸೂತ್ರಗಳು :–**

**ಓಂ ಪತ್ಯಾದಿಶಬ್ದೇಭ್ಯಃ ಓಂ** || ೪೩ ||

ಬ್ರಾಹ್ಮಣ ಶಬ್ದವಾಚ್ಯ ವಿಷ್ಣು ಹೊರತಾಗಿ ಬ್ರಹ್ಮನಲ್ಲ ವೇದ ವೇದ್ಯನಾದಕಾರಣ

**ದಾಸಸಾಹಿತ್ಯ :–**

ಭೂಸುರರೊಳಗಿಪ್ಪಬ್ಜಭವನೊಳು
ವಾಸುದೇವನು ವಾಯುಖಿಗಪ ಸ-
ದಾಶಿವಹಿಪೇಂದ್ರನು ವಿವಸ್ವಾನ್ನಾಮಕ ಸೂರ್ಯ
ಭೇಶ ಕಾಮಮರಸ್ಯ ವರುಣಾ-
ದೀ ಸುರರು ಕ್ಷತ್ರಿಯರೊಳಿಪ್ಪರು
ವಾಸವಾಗಿಹ ಸಂಕರುಷಣನ ನೋಡಿ ಮೋದಿಪರು

**[ಶ್ರೀಹರಿಕಥಾಮೃತಸಾರ]**

–o–o–o–o–

## ಪ್ರಥಮಾಧ್ಯಾಯ ಚತುರ್ಥಪಾದ

### 1. ಅನುಮಾನಿಕಾಧಿಕರಣ

**ಸೂತ್ರಗಳು :-**

1. ಓಂ ಅನುಮಾನಿಕಮಪ್ಯೇಕೇಷಾಮಿತಿ ಚೇನ್ನ, ಶರೀರರೂಪಕ ವಿನ್ಯಸ್ತ ಗೃಹೀತೇ ರ್ದರ್ಶಯತಿ ಚ ಓಂ || ೧ ||
2. ಓಂ ಸೂಕ್ಷ್ಮಂ ತು ತದರ್ಹತ್ವಾತ್ ಓಂ || ೨ ||
3. ಓಂ ತದಧೀನತ್ವಾದರ್ಥವತ್ ಓಂ || ೩ ||
4. ಓಂ ಜ್ಞೇಯತ್ವಾವಚನಾಚ್ಚ ಓಂ || ೪ ||
5. ಓಂ ವದತೀತಿ ಚೇನ್ನ, ಪ್ರಾಜ್ಞೋ ಹಿ ಓಂ || ೫ ||
6. ಓಂ ಪ್ರಕರಣಾತ್ ಓಂ || ೬ ||
7. ಓಂ ತ್ರಯಾಣಾಮೇವ ಚೈವ ಮುಪನ್ಯಾಸಃ ಪ್ರಶ್ನಶ್ಚ ಓಂ || ೭ ||
8. ಓಂ ಮಹದ್ವಚ್ಚ ಓಂ || ೮ ||
8. ಓಂ ಚಮಸವದ ವಿಶೇಷಾತ್ ಓಂ || ೯ ||

ಇಲ್ಲಿ ಪ್ರತಿಪಾದ್ಯತ್ವವನ್ನು ತೋರಿಸುತ್ತ ಓಂದಿನ ಪಾದಾದಿಗಳಲ್ಲಿ ಆನಂದ ಆನಂದಮಯ, ಆಕಾಶ ಇಂದ್ರ ಮೊದಲಾದ ಶಬ್ದಗಳ ಸಮನ್ವಯ ಹೇಳಿದ್ದರು. ಈಪಾದದಲ್ಲಿ ಸ್ವರವರ್ಣ ಪದಸ್ವರೂಪಾದಿ ಎಲ್ಲಾ ಶಬ್ದಗಳಿಗೂ ಸಮನ್ವಯ ಮಾಡು ತ್ತಲಿದ್ದಾರೆ'ದುಃಖಿ ಪರಾಧಿನಾದಿ ವಾಕ್ಯಗಳು ಹೇಗೆ ಪರಮಾತ್ಮನಿಗೆ ಕೂಡುವುದೆಂದರ **"ನಾಮಾನಿ ಸರ್ವಾಣಿ ಯಾಮಾ ವಿಶಂತಿ"** ಇತ್ಯಾದಿ ಶ್ರುತಿರೀತ್ಯ ಪರಮಾತ್ಮನೇ ಎಲ್ಲಾ ಶಬ್ದಾದಿಗಳಿಗೂ ಮುಖ್ಯ ವಾಚ್ಯನು **"ಅವ್ಯಕ್ತಮುಚಲಂಶಾಂತಂ"** ಎಂದು ಪ್ರಯೋಗವಿರುವುದಿಂದ ಎಲ್ಲಾ ಶಬ್ದಾದಿಗಳಿಗೂ ಅವನೇ ನಿಯಾಮಕನು.

**ದಾಸಸಾಹಿತ್ಯ :-**

ಆನಂದ, ಆನಂದ ಮತ್ತೆ ಪರಮಾನಂದ ಆನಂದ ಕಂದವಲಿಯೋ ಪನಂಡನದ ವೇದವೃಂದ ಅ ಮೊದಲು ಕ್ಷ ಕಾರಂತ ಈಮಹಾವರ್ಣಗಳೆಲ್ಲಾ ಸ್ವಾಮಿಯಾದ ವಿಷ್ಣುವಿನ ನಾಮವೆಂದು ತಿಳಿದವಗೆ.

(ಶ್ರೀವಿಜಯದಾಸರು)

### 2. ಜ್ಯೋತಿರುಪಕ್ರಮಾಧಿಕರಣ

1. ಓಂ ಜ್ಯೋತಿರುಪಕ್ರಮಾತ್ತು, ತಥಾ ಹ್ಯಾಧೀಯತ ಏಕೇ ಓಂ ||೧೦||
2. ಓಂ ಕಲ್ಪನೋಪದೇಶಾಚ್ಚ ಮಧ್ವಾದಿ ವದ ವಿರೋಧಃ ಓಂ ||೧೧||

ಜ್ಯೋತಿಷ್ಟೋಮಾದಿಶಬ್ದಗಳಿಗೆ ಭಗವಂತನಲ್ಲಿ ಸಮನ್ವಯವಾಗುವುದನ್ನು ತಿಳಿಸುತ್ತಾರೆ, ಏಕೆಂದರೆ ಪರಮಾತ್ಮನೇ ಸರ್ವಶಬ್ದ ವಾಚ್ಯನಾದ ಕಾರಣ ಮುಖ್ಯಾರ್ಥ ಅವನಲ್ಲಿಯೇ ಸಮನ್ವಯ ಹೊರತು ಅನ್ಯರಲಿಲ್ಲ.

**ದಾಸಸಾಹಿತ್ಯ :-**

ಜೋತಿರೂಪಗೆ ಪ್ರತಿಮೆಗಳು ಸಾಂ-
ಕೇತಿಕಾರೋಪಿತ ಸುಪೌರುಷ
ಧಾತು ಸಪ್ತಕ ಧೈರ್ಯ ಶೌರ್ಯೌದಾರ್ಯ ಚಾತುರ್ಯ
ಮಾತುಮಾನ ಮಹತ್ತ್ವ ಸಹನಸು-
ನೀತಿನಿರ್ಮಲ ದೇಶ ಬ್ರಾಹ್ಮಣ-
ಭೂತ ಪಂಚಕಬುದ್ಧಿ ಮೊದಲಾದಿಂದ್ರಿಯಸ್ಥಾನ ।

(ಹರಿಕಥಾಮೃತಸಾರ 24–21)

## 15. ನ ಸಂಖ್ಯೋಪ ಸಂಗ್ರಹಾಧಿಕರಣ

**ಸೂತ್ರಗಳು :-**

**1).ಓಂ ನ ಸಂಖ್ಯೋಪಸಂಗ್ರಹಾದಪಿ ನಾನಾ ಭಾವಾದತಿರೇಕಾಚ್ಚ ಓಂ ॥ ೧೨ ॥**

**2) ಓಂ ಪ್ರಾಣಾದಯೋ ವಾಕ್ಯ ಶೇಷಾತ್ ಓಂ ॥ ೧೩ ॥**

**3. ಜ್ಯೋತಿಷೈಕೇಷಾಮಸತ್ಯನ್ನೇ ಓಂ ॥ ೧೪ ॥**

ಇಲ್ಲಿ ಬಹುತ್ವ ಸಂಖ್ಯೆಯುಳ್ಳ ವಸ್ತು ವಾಚಕ ಶಬ್ದಗಳಿಗೂ ಆಧಾರಾಧೇಯ ಶಬ್ದಗಳಿಗೂ ಸಮನ್ವಯಮಾಡುತ್ತಾ ಶ್ರೀಹರಿಗೆ ಪಂಚಜನ ಆಕಾಶಾದಿ ಶಬ್ದ ವಾಚ್ಯತ್ವವು ಅನುಪಪನ್ನವಾಗುವುದಿಲ್ಲ ಎಂದು ಸಾಧಿಸಿದ್ದರೆ. "**ಪ್ರಾಣಸ್ಯ ಪ್ರಾಣಃ**" ಎಂಬ ಉಪನಿಷತ್ ವಾಕ್ಯದಂತೆ ಪ್ರಾಣಾದಿ ಶಬ್ದ ವಾಚ್ಯ ಶ್ರೀಹರಿಯೇ.

**ದಾಸಸಾಹಿತ್ಯ :-**

1) ವಿಶ್ವರೂಪ ದರುಶನಾಧಿಕಾರಿಗಳಿರಿದು
ವಿಶ್ವನಾಮಕ ಶ್ರೀಗೋಪಾಲವಿಠಲನ ಭಜಿಸು.

2) ಜಗಜನ್ಮಾದಿಕಾರಣ ಗೋಪಾಲವಿಠಲ।
ನಿಗಮ ಗೋಚರ ಅಘಶೂನ್ಯ ಪಾವನನೆ॥

**(ಶ್ರೀಗೋಪಾಲದಾಸರು)**

3) ಜಪವನೆಲ್ಲವ ನಿರ್ಮಿಸುವ ನಾ-
ಲ್ಮೊಗನೊಳಗೆ ತಾನಿದ್ದು ಸಲಹುವ
ಗಗನಕೇಶನೊಳಿದ್ದು ಸಂಹರಿಸುವನು ಲೋಕಗಳ|
ಸ್ವಗತ ಭೇದ ವಿವರ್ಜಿತನು ಸ-
ರ್ವಗ ಸದಾ ನಂದೈಕ ದೇಹನು
ಬಗೆ ಬಗೆಯ ನಾಮದಲಿ ಕರೆಸುವ ಭಕ್ತರನು ಪೊರೆವ ||

(ಶ್ರೀ ಹರಿಕಥಾಮೃತಸಾರ 2–8)

## 4. ಆಕಾಶಾಧಿಕರಣ

**1. ಓಂ ಕಾರಣತ್ವೇನ ಚಾಕಾಶಾಧಿಷು ಯಥಾವ್ಯಪದಿಷ್ಟೋಕ್ತೇಃ ಓಂ ||೧೫||**

ಅವಾಂತರ ಕಾರಣವಾಚಕಗಳಾದ ಆಕಾಶಾದಿ ಶಬ್ದಗಳಿಂದ ಶ್ರೀಹರಿಯೇ ಮುಖ್ಯವಾಗಿ ಹೇಳಲ್ಪಡುತ್ತಾನೆ. "ಯ ಆಕಾಶೇ ತಿಷ್ಠನ್" ಇತ್ಯಾದಿವಾಕ್ಯದಂತೆ.

**ದಾಸಸಾಹಿತ್ಯ:-**

ಜಲಧರಾಗಸದೊಳಗೆ ಚರಿಸುವ
ಹಲವು ಜೀವರ ನಿರ್ಮಿಸಿಹನದ
ರೊಳು ಸಜಾತಿ ವಿಜಾತಿ ಸಾಧಾರಣ ವಿಶೇಷಗಳ
ತಿಳಿದು ತತ್ತತ್ ಸ್ಥಾನದಲಿ ವೆ-
ಗ್ಗಳಿಸಿ ಹಬ್ಬಿದ ಮನದಿ ಪೂಜಿಸು-
ತಲವವ್ಯಾಪ್ತನ ರೂಪಗಳ ನೋಡುತಲೆ ಒಗ್ಗುತಿರು||

(ಹರಿಕಥಾಮೃತಸಾ

## 5. ಸಮಾಕರ್ಷಾಧಿಕರಣ

**ಸೂತ್ರಗಳು:-**

**1.** ಓಂ ಸಮಾಕರ್ಷಾತ್ ಓಂ || ೧೬ ||

**2.** ಓಂ ಜಗದ್ವಾಚಿತ್ವಾತ್ ಓಂ || ೧೭ ||

**3.** ಓಂ ಜೀವಮುಖ್ಯ ಪ್ರಾಣಲಿಂಗಾದಿತಿ ಚೇತ್ತದ್ವ್ಯಾಖ್ಯಾತಂ ಓಂ || ೧೮ ||

**4.** ಓಂ ಅನ್ಯಾರ್ಥಂತು ಜೈಮಿನಿಃ ಪ್ರಶ್ನವ್ಯಾಖ್ಯಾನಾಭ್ಯಾಮಪಿ ಚೈವಮೇಕೇ ಓಂ || ೧೯ ||

5. ಓಂ ವ್ಯಾಖ್ಯಾನ್ವಯಾತ್ ಓಂ || ೨೦ ||

6. ಓಂ ಪ್ರತಿಜ್ಞಾಸಿದ್ಧೇರ್ಲಿಂಗಮಾಶ್ಮರಥ್ಯಃ ಓಂ || ೨೧ ||

7. ಓಂ ಉತ್ಕ್ರಮಿಷ್ಯತ ಏವಂಭಾವಾದಿ ತ್ಯೌಡುಲೋಮಿಃ ಓಂ || ೨೨ ||

8. ಓಂ ಅವಸ್ಥಿತೇರಿತಿ ಕಾಶಕೃತ್ಸ್ನಃ ಓಂ || ೨೩ ||

ಸರ್ವಶಬ್ದಗಳೂ ಶ್ರೀಹರಿಯಲ್ಲಿ ಸಮನ್ವಯ ಮಾಡಿದರೆ ವ್ಯವಹಾರ ಕೊಡುವುದಿಲ್ಲ. ಅಂದರೆ ಸರ್ವಶಬ್ದಗಳೂ ಮುಖ್ಯ ವೃತ್ತಿಯಿಂದ ಪರಮಾತ್ಮನಲ್ಲೇ ಸಮನ್ವಯ ಮಾಡಲೇಬೇಕೆಂದು ಶಾಸ್ತ್ರ ವಿಧಿ. ಚಿತ್ರದಲ್ಲಿ ಬರೆದ ಸಿಂಹವನ್ನು ವ್ಯವ-ಹರಿಸುವಂತೆ ಜನರಿಗೆ ಅನ್ಯತ್ರದಲ್ಲಿ ಶಬ್ದ ವ್ಯವಹಾರ. ಕರ್ಮದೇವತೆಗಳಿಗೆ ಆಧಾರ ಶ್ರೀಹರಿಯೇ. ಕರ್ಮಾದಿಗಳಲ್ಲಿ ವೇದಗತಶಬ್ದಗಳಿಗೆ ವ್ಯವಹಾರ ಕೊಡಬಹುದು.

**ದಾಸಸಾಹಿತ್ಯ:–**

ಆವದೇವೋತ್ತಮನು ಆವಾವಗುಣಗಳಿಹ ॥ ವಾವಾವಶಬ್ದ ವಾಚ್ಯಾವರೀತಿ । ಈ ವಿಚಾರವನು ಪೇಳೆನಲು ನಗುತರಾ। ಜೀವಸಂಭವಗೆ ಇಂತೆಂದು ನುಡಿದ॥ ವನಜ ಸಂಭವ ಕೇಳು ನಾನೇ ಸರ್ವೋತ್ತಮನು । ಎನಗನಂತಾನಂತ ಮಂಗಳ ಗುಣ । ಪ್ರಣವವಾಚ್ಯನು ನಾನು ಅಷ್ಟವರ್ಣೋಪೇತ । ಪ್ರಣವದ ವಿಚಾರವನು ಪೇಳ್ವೆ ನಿನಗೆ– – – -

(ತಂತ್ರಸಾರ–ಶ್ರೀಜಗನ್ನಾಥದಾಸರು)

ಶ್ರುತಿಸ್ಮೃತ್ಯರ್ಥವ ತಿಳಿದವಂ । ಮತವಿಶಿಷ್ಟನು ಕರ್ಮಮಾಡಲು । ಪ್ರತಿ-ಗ್ರಹಿಸನು ಪಾಪಗಳ ಕೊಡುತಿಪ್ಪ ಸತ್ಯ ಹರಿ ॥ ಚತುರದಶಭುವನಾಧಿಪತಿ ಕೃತು-। ಕೃತಜ್ಞನಿಯಾಮಕನು ಎನೆ । ಮತಿಭ್ರಂಶ ಪ್ರಮಾದಸಂಕಟದೋಷವವಗಿಲ್ಲ.

(ಹರಿಕಥಾಮೃತಸಾರ 18-36)

'ಅ'ಕಾರ ಮೊದಲು ಗೊಂಡು 'ಕ್ಷ'ಕಾರ ಪರಿಯಂತ ಎಲ್ಲಾ ಹರಿನಾಮ ಎಂದವಗೆ ಆನಂದ. ಆನಂದ. ಆನಂದ ಮತ್ತೆ ಪರಮಾನಂದ.

(ಶ್ರೀ ವಿಜಯದಾಸರು)

## 6. ಪ್ರಕೃತ್ಯಧಿಕರಣ

**ಸೂತ್ರಗಳು :–**

1. ಓಂ ಪ್ರಕೃತಿಶ್ಚ, ಪ್ರತಿಜ್ಞಾ ದೃಷ್ಟಾಂತಾನು ಪರೋಧಾತ್ ಓಂ || ೨೪ ||

2. ಓಂ ಅಭಿಧ್ಯೋಪದೇಶಾಚ್ಚ ಓಂ || ೨೫ ||

3. ಓಂ ಸಾಕ್ಷಾಚ್ಚೋಭಯಾಮ್ನಾನಾತ್ ಓಂ || ೨೬ ||

**4. ಓಂ ಆತ್ಮಕೃತೇಃ ಪರಿಣಾಮಾತ್ ಓಂ || ೨೭ ||**

**5. ಓಂ ಯೋನಿಶ್ಚ ಹಿ ಗೀಯತೇ ಓಂ || ೨೮ ||**

ಪ್ರಕೃತ್ಯಾದಿ ಶಬ್ದಗಳು ಸ್ತ್ರೀಲಿಂಗ ವಾಚಕವಾದದ್ದು. ಇದು ಪರಮಪುರುಷನಾದ ಶ್ರೀಹರಿಯಲ್ಲಿ ಕೂಡುವುದಿಲ್ಲ. ಅಂತೆಯೇ ನಪುಂಸಕಲಿಂಗಶಬ್ದಗಳೂಕೂಡ ಎಂಬ ಶಂಕೆ ಬಂದಾಗ **ಮಾಯಾಂತು ಪ್ರಕೃತೀಂ ವಿಧ್ಯಾತ್ ಪ್ರಕೃತಿರ್ವಾಸನಾ** ಹಾಗೂ **"ಏಷಸ್ತ್ರೀಷ ಪುರುಷ"** ಎಂದಿರೋಣದರಿಂದ ಶ್ರೀಹರಿ ಪ್ರಕೃತಿಯನ್ನು ಪ್ರವೇಶಮಾಡಿ ಮಹತತ್ವಾದಿರೂಪದಿಂದ ಅದಕ್ಕೆ ನಿಯಮಕನಾಗಿ ತಾನೂ ಸಹ ಬಹು ರೂಪದಿಂದ **"ಪ್ರಕೃಷ್ಟಾಕೃತೀರ್ಯಸ್ಯ"** ಎನ್ನುವ ಯೋಗ ಕೂಡುವುದರಿಂದ ಪ್ರಕೃತ್ಯಾದಿ ಸರ್ವ ಸ್ತ್ರೀಲಿಂಗದ ಶಬ್ದ ಮುಖ್ಯಾರ್ಥನು ಶ್ರೀಹರಿಯೇ ಎಂದು ಸಿದ್ಧಾಂತವು.

**ದಾಸಸಾಹಿತ್ಯ :-**

ಎಂಟು ಪ್ರಕೃತಿಗಳೊಳಗೆ ವಿಶ್ವಾ-। ದ್ಯೆಂಟು ರೂಪದಲಿದ್ದು ಭಕುತರ ಕಂಟಕವ ಪರಿಹರಿಸುತಲಿ ಪಾಲಿಸುವ ಪ್ರತಿದಿನದಿ॥

ನೆಂಟನಂದದಿ ಎಡೆಬಿಡದೆ ವೈ-। ಕುಂಠರಮಣನು ತನ್ನವರ ನಿ-। ಷ್ಕಂಟಕ ಸುಮಾರ್ಗದಲಿ ನಡೆಸುವ ದುರ್ಜನರ ಬಿಡುವ॥

**(ಹರಿಕಥಾಮೃತಸಾರ11-5)**

ಸ್ತ್ರೀ ನಪುಂಸಕಪುರುಷ ಭೂಸಲಿ-।ಲಾನಲಾನಿಲ ಗಗನಮನಶಶಿ-।
ಭಾನು ಕಾಲಗುಣಪ್ರಕೃತಿಯೊಳಗೊಂದು ತಾನಲ್ಲ ॥

ಏನು ಇವನ ಮಹಾ ಮಹಿಮೆ ಕಡೆ-। ಗಾಣರಜಭವಶಕ್ರಮುಖರು ನಿ-। ಧಾನಿ-
ಸಲು ಮಾನವರಿಗಳವಡುವುದೆ ವಿಚಾರಿಸಲು।

**(ಶ್ರೀಹರಿಕಥಾಮೃತಸಾರ3-2)**

ಎಲ್ಲರಲ್ಲೂ ಶ್ರೀಹರಿತಾನಿದ್ದು ಮುಖ್ಯ ಚೇಷ್ಟಕನಾಗುತ್ತಿದ್ದಾನೆಂಬುದೇ ದಾಸರ ಸಂದೇಶ.

## 7. ಏತೇನ ಸರ್ವೇ ವ್ಯಾಖ್ಯಾತಾಧಿಕರಣ

**ಸೂತ್ರ:- ಓಂ ಏತೇನ ಸರ್ವೇ ವ್ಯಾಖ್ಯಾತಾ ವ್ಯಾಖ್ಯಾತಾಃ ಓಂ ||೨೯||**

**"ಅಸದ್ವಾ ಇದಮಗ್ರಆಸೀತ್"** ಎಂದಿರೋಣದರಿಂದ ಅಸತ್ತು ಶೂನ್ಯ ಮೊದಲಾದ ಶಬ್ದಗಳಿಗೆ ಮುಖ್ಯ ವಾಚ್ಯನು ಶ್ರೀಹರಿಯೇ ಎಂದು ಸಿದ್ಧಾಂತ.

**ದಾಸಸಾಹಿತ್ಯ:-**

ತಾರೋ, ಬಾರೋ, ಬೀರೋ, ಸಾರೋ. ಹಾಕೋ, ಓಗೋ, ಹೋಗೋ, ಸೇರೋ, ಯಾರೋ, ತೋರೋ ಎಂಬುದೆಲ್ಲಾ ಹರಿನಾಮ ಎಂದವಗೆ ಆನಂದ ಆನಂದ.

-೦-೦-೦-೦-

## ದ್ವಿತೀಯಾಧ್ಯಾಯ ಪ್ರಥಮಪಾದ

### 1. ಸ್ಮೃತ್ಯಧಿಕರಣ

**ಸೂತ್ರಗಳು :–**

**1. ಓಂ ಸ್ಮೃತ್ಯನವಕಾಶದೋಷಪ್ರಸಂಗ ಇತಿ ಚೇನ್ನಾನ್ಯ ಸ್ಮೃತ್ಯನವಕಾಶದೋಷ ಪ್ರಸಂಗಾತ್ ಓಂ ॥ ೧ ॥**

**2. ಓಂ ಇತರೇಷಾಂ ಚಾನುಪಲಬ್ಧೇಃ ಓಂ ॥ ೨ ॥**

**3. ಓಂ ಏತೇನ ಯೋಗಃ ಪ್ರತ್ಯುಕ್ತಃ ಓಂ ॥ ೩ ॥**

ಅವೈದಿಕ ಸ್ಮೃತಿಗಳಿಗೆ ಪ್ರಾಮಾಣ್ಯವೇ ಇಲ್ಲದಿರುವುದರಿಂದ ಸ್ಮೃತಿಸಮನ್ವಯದಿಂದ ಹೇಳಲ್ಪಟ್ಟ ವಿಶ್ವ ಕರ್ತೃತ್ವವು ವಿಷ್ಣುವಿಗೆ ಯುಕ್ತವಾದುದು. ಪಾಶುಪತಾದ್ಯಾಗಮನ ಅಶಾಸ್ತ್ರೀಯವಾದುದೆಂದು ನಿರಾಕರಿಸುತ್ತಾರೆ.

**ದಾಸಸಾಹಿತ್ಯ :-**

ಶ್ರುತಿಗೆ ಅಪ್ರಮಾಣ್ಯ ಬಾರದಂತೆ ಮಧ್ವ-। ಮತಕ್ಕೆ ವಿರೋಧವಾಗದಂತೆ ಕ್ಷಿತಿಯೊಳಗೆ ಸುಜನರಿಗೆ ಹಿತವಾಗುವಂತೆ ಶ್ರೀ-। ಪತಿಯ ಸೇವಿಸಿ ಸುಗತಿ ಪಡಿಯೋ ಪ್ರಾಣಿ – ನೆಚ್ಚದಿರು ಸಂಸಾರಕಡೆಗೆ ಹಾಕುವದಲ್ಲ.

(ಶ್ರೀ ವಿಜಯದಾಸರು)

**ಹರಿದಾಸಸಾಹಿತ್ಯ :–** (ಪರ ಸೃಷ್ಟಿಕರ್ತರ, ಸಂಹಾರಕರ್ತಾದಿಗಳನ್ನು ಹೇಳುವ ಶಾಸ್ತ್ರ ಅಸಮ್ಮತ)

1) ಸೃಷ್ಟಿಸ್ಥಿತಿಲಯ ಕಾರಣ ಗೋವಿಂದ ಈ ಪರಿ ಮಹಿಮೆಯ
ತಿಳಿಯೋದೆ ಆನಂದ. ಗೋವಿಂದ ನಿನ್ನಾನಂದ. ಸಾಧನ ಸಕಲವು
ಎಲ್ಲಾ ನಿನ್ನಿಂದ.

(ಶ್ರೀ ಪುರಂದರದಾಸರು)

2. ಭಕುತರಿಗಾಗಿ ನೀನು ಜಗವ ಪುಟ್ಟಿಸಿದೆಯ್ಯ
ಭಕುತರಿಗಾಗಿ ನೀ ಅವತಾರಮಾಡಿದೆಯ್ಯ
ಭಕುತರು ನಿನ್ನನ್ನು ಭಜಿಸದಿದ್ದರೆ ದೇವ
ಸಕಲ ಲೋಕ ನಿನ್ನ ಅರಿಯುವರೆಂತೋ.....

(ಶ್ರೀ ಗೋಪಾಲದಾಸರು)

3. ಎಲ್ಲಿ ನೋಡಲು ನೀನಿಲ್ಲದ ಸ್ಥಳವಿಲ್ಲ । ಎಲ್ಲರಲ್ಲಿ ನೀನು ಎಲ್ಲ
ಪ್ರೇರಕ ನೀನು । ಎಲ್ಲಕ್ಕೆ ಭೇದ ಎಲ್ಲಾ ನಿರ್ಲೇಪ । ಚಿಲ್ಲರೆ

ದೈವರ ಗಂಡ ಗೋಪಾಲವಿಠಲ ನಿನ್ನ ಬಲ್ಲವರೇ ಬಲ್ಲರು
ಕಾಣೋ ಪೂರ್ಣರೇಯ.

**(ಶ್ರೀ ಗೋಪಾಲದಾಸರು)**

## 2. ನ ವಿಲಕ್ಷಣತ್ವಾಧಿಕರಣ

**1. ಓಂ ನ ವಿಲಕ್ಷಣತ್ವಾದಸ್ಯ, ತಥಾತ್ವಂ ಚ ಶಬ್ದಾತ್ ಓಂ || ೪ ||**

**2. ಓಂ ದಶ್ಯತೇ ತು ಓಂ || ೫ ||**

ಶ್ರುತಿ ಸ್ಮೃತಿಗಳು ಅಪ್ರಮಾಣ್ಯ ಎಂಬ ಶಂಕೆ ಬರಬಾರದು. "ವಾಚಾವಿರೂಪ ನಿತ್ಯಯಾ" ಎಂದಿರೋಣವರಿಂದ ಶ್ರುತಿ ಸ್ಮೃತಿಗಳು ಸಾಕ್ಷಿಯಂತೆಯೇ ಪ್ರಮಾಣವಾಗಿ ರುವುದು. ಇದರಲ್ಲಿ ಅನುಮಾನಬಾರದು.

**ದಾಸಸಾಹಿತ್ಯ :–**

ಶ್ರುತಿಗಳಾತನ ಮಾತು ವಿಮಲ-। ಸ್ಮೃತಿಗಳಾತನ ಶಿಕ್ಷೆ ಜೀವ-। ಪ್ರತತಿ ಪ್ರಕೃತಿಗಳೆರಡು ಪ್ರತಿಮೆಗಳೆನಿಸಿಕೊಳ್ಳುತಿಹವು ॥ ಇತರ ಕರ್ಮಗಳೆಲ್ಲ ಲಕ್ಷ್ಮೀ-। ಪತಿಗೆ ಪೂಜೆಗಳಿಂದ ಸ್ಮರಿಸುತ । ಚತುರವಿಧ ಪುರುಷಾರ್ಥಗಳ ಬೇಡದಿರು ಸ್ವಪ್ನದಲಿ ॥

**[ಶ್ರೀ ಹರಿಕಥಾಮೃತಸಾರ 16-25]**

ಮೌನ ವ್ರತ ಶ್ರುತಿಧ್ಯಾನ–ಅಹರಹರ ಜಪ ವ್ಯಾ-। ಖ್ಯಾನ ಧರ್ಮ ಸುಧಾಪ ಅಜಿತೇಂದ್ರಿಯರಿಗಿಹಿ । ಕಾನು ಭೋಗಕ್ಕೆ ಕಾರಣ - ಡಾಂಬಿಕರಿಗಿವು ಫಲ । ವೇನು ಕೊಡುವ ವಿಧಾನ–ಮೋಕ್ಷಕ್ಕೆ ಕಾರಣ.

**[ಶ್ರೀ ಗುರುಗೋಪಾಲವಿಠಲರು]**

## 3. ಅಭಿಮಾನ್ಯಾಧಿಕರಣ

**ಸೂತ್ರ :–**

**1. ಓಂ ಅಭಿಮಾನಿವ್ಯಪದೇಶಸ್ತು ವಿಶೇಷಾನುಗತಿಭ್ಯಾಂ ಓಂ || ೬ ||**

**2. ಓಂ ದೃಶ್ಯತೇ ಚ ಓಂ || ೭ ||**

"ಮೃದಬ್ರವೀತ್ – ಅಪೋ ಬ್ರುವನ್." ಇತ್ಯಾದಿ ವಚನಗಳು ಅಪ್ರಮಾಣ ಎಂದರೆ ಅದರ ಅಭಿಮಾನಿ ದೇವತೆಗಳು ಮಾತನಾಡಿದರು ಎಂದರ್ಥ ಮಾಡಬೇಕೇ- ಹೊರತು ವೇದಗಳೇ ಅಪ್ರಮಾಣ ಎನ್ನಲಾಗದು.

**ದಾಸಸಾಹಿತ್ಯ :-**

1. ಜನರೊಳಗೆ ನೀನಿನ್ನು ಜನುಮಜನುಮಗಳಲ್ಲಿ ಗುಣ ಕಾಲಕ್ರಿಯಾ ಸ್ವಭಾವಗಳನುಸರಿಸಿ ಪುಣ್ಯಪಾಪವ ಮಾಡಿಸಿ ಪೊರೆವ ಕರುಣಾಳು ಕೃಷ್ಣಾ ನಿನ್ನ ಸಂಕಲ್ಪಾನುಸಾರ ಮಾಡೊ.

2. ಬಿಸಜ ಸಂಭವನ ನಿರ್ಮಿಸಿ ನಾಭಿ ಕಮಲದಿ । ಸ್ವಶರೀರದೊಳು ಸುಮನಸರ ಪಡೆದು ನಿನ್ನ । ಪೆಸರಿಟ್ಟು ಅವರವರೊಳಗನಾದೋಪಾದಿ ತೋ-। ರಿಸಿದೆ ನೀ ಸ್ವತಂತ್ರ ಅಸಮನೆನಿಸಿಕೊಂಡು । ಬಸುರೊಳಗಿಟ್ಟು ಪೊಂಬಸುರಾದಿ ಸುರರ ಪಾಲಿಸುವಿ ಪ್ರತಿ ಕಲ್ಪದಿ........ಪ್ರಸಪತ್ರ ನಾಮವಂದಿಸುವೆ ಪ್ರಮೋದಿ - ತುತಿಸಬಲ್ಲನೆ ನಾನಿನ್ನ ವೆಂಕಟರನ್ನ,

(ಶ್ರೀಜಗನ್ನಾಥದಾಸರು)

## 4. ಅಸಧಿಕರಣ

**ಸೂತ್ರಗಳು :-**

**1. ಓಂ ಅಸದಿತಿ ಚೇನ್ನ, ಪ್ರತಿಷೇಧಮಾತ್ರತ್ವಾತ್ ಓಂ || ೮ ||**

**2. ಓಂ ಅಪೀತೌ ತದ್ವತ್ಪ್ರಸಂಗಾದಸಮಂಜಸಂ ಓಂ || ೯ ||**

**3. ಓಂ ನ ತು, ದೃಷ್ಟಾಂತಭಾವಾತ್ ಓಂ || ೧೦ ||**

**4. ಓಂ ಸ್ವ ಪಕ್ಷದೋಷಾಚ್ಚ ಓಂ || ೧೧ ||**

**5. ಓಂ ತರ್ಕಾಪ್ರತಿಷ್ಠಾನಾದಪ್ಯನ್ಯಥಾನುಮೇಯಮಿತಿ ಚೇದೇವಮಪ್ಯನಿರ್ಮೋಕ್ಷಪ್ರಸಂಗಃ ಓಂ || ೧೨ ||**

**6. ಓಂ ಏತೇನ ಶಿಷ್ಟಾ ಪರಿಗ್ರಹಾ ಅಪಿ ವ್ಯಾಖ್ಯಾತಾಃ ಓಂ || ೧೩ ||**

ಶ್ರೀಹರಿಗೆ ಜಗತ್ಕರ್ತೃತ್ವ ಸ್ಥಿರಪಡಿಸುವ ಅಧಿಕರಣವಾಗಿದೆ. ಜಗತ್ಕಾರಣ ಅಸತ್ತಲ್ಲ ಬ್ರಹ್ಮನೇ. ಏಕೆಂದರೆ ಕೊನೆಗೆ ಅಸತ್ತೇ ಉಳಿಯಬೇಕಾದೀತು. ಕೇವಲ ತರ್ಕದಿಂದ ಶಾಸ್ತ್ರವಿರುದ್ಧವಾಗಿ ಕೂಡಿಸಲಾಗದು. ಶಾಸ್ತ್ರವಿಚಾರಮಾಡಿದಾಗ ವಿಷ್ಣುವೇ ಅಸದಾಗಿ ಶಬ್ದಗಳಿಂದ ಹೇಳಲ್ಪಡುತ್ತಾನೆ. ಪ್ರಾಗಭಾವಾದಿಗಳು ಅಲ್ಲ, ಆದ್ದರಿಂದ ವಿಷ್ಣುವು ಜಗತ್ಕಾರಣತ್ವ ಶ್ರುತಿಗೆ ವಿರೋಧಿಯಲ್ಲ, ಅವನೇ ಜಗತ್ಕಾರಣ ಎಂಬುದರಲ್ಲಿ ನಿಸ್ಸಂದೇಹ.

ಜಗಜ್ಜನ್ಮಾದಿ ಕರ್ತ ಗೋವಿಂದ, ಉದರದಿಲೋಕ
ಲಘುವಾಗಿ ಧರಿಸಿದ ಮುಕುಂದ, ಭಕ್ತರ ಮನಕೆ
ಝುಗಝುಗಿಸುತ ಪೊಳೆವಾನಂದ. ನಿಗಮಾವಳಿಯಿಂದ

ಅಗಣಿಕ ಮುನಿಗಣ ನಗ ಖಗ ಮೃಗ ಶಶಿ
ಗಗನ ಮಣ್ಯಾದ್ಯರು ಸೊಗಸಾಗಿ ಬಗೆ ಬಗೆ
ಪೊಗಳು ಕಲೀ ಬೇಗ ಜಿಗಿ ಜಿಗಿದಾಡಲು
ಮುಗುಳು ನಗೆಯ ಮಹೋಗರ ಗಿರಿವಾಸ
ಬಾರಯ್ಯ ಬಾಬಾ ಭಕುತರ ಪ್ರಿಯೆ....ಶ್ರೀನಿವಾಸರೇಯ ||

**(ಶ್ರೀ ಗೋಪಾಲದಾಸರು)**

## 5. ಭೋಕ್ತ್ರಧಿಕರಣ

**ಸೂತ್ರ :-**

**ಓಂ ಭೋಕ್ತ್ರಾಪತ್ತೇರವಿಭಾಗಶ್ಚೇತ್ಸ್ಯಾಲ್ಲೋಕವತ್ ಓಂ || ೧೪ ||**

ಮುಕ್ತಾ ಮುಕ್ತ ಬ್ರಹ್ಮರುದ್ರ ಮೊದಲಾದ ದೇವತೆಗಳಿಂದ ಯಾವ ಸರ್ವೋತ್ತಮತ್ವವನ್ನು ಹೊಂದಿಲಿಕ್ಕೆ ಅಸಾಧ್ಯವೊ ಅಂತಹ ಸರ್ವೋತ್ತಮತತ್ವಕ್ಕೆ ಕಾರಣ ಶ್ರೀಹರಿ ಎಂದು ಸ್ಕಾಂದದಲ್ಲಿಯೂ ಹೇಳಿದೆ.

**ದಾಸಸಾಹಿತ್ಯ :-**

ಎಂದಿಗೆ ನಿನ್ನ ಪದ ಕಾಂಬೆನೋರಂಗ । || ಪ ||
ಇಂದಿರಾದೇವಿ ನಿನ್ನ ಪೊಂದಿದ್ದ ಕಾರಣ
ದಂದೂಗವನು ಕಾಣಲಿಲ್ಲ ಸ್ವಾಮಿ || ೧ ||
ಬೊಮ್ಮಾನು ನಿನ್ನ ಮಗ ನಂಬಿ ಶುತಿಸುವಾಗ
ಮೊಮ್ಮಗ (ರದ್ರ) ಕುಣಿ ಕುಣಿದಾಡುವ || || ೨ ||

**(ಶ್ರೀ ವಾಸುದೇವ ವಿಠಲರು)**

ಸೃಷ್ಟ್ಯಾದಿಕರ್ತ ತ್ರಿಜಗದ್ಭರ್ತ । ಲೋಕೈಕ ಸಮರ್ಥ
ವೃಷ್ಟೀಶ ವೃಂದಾರಕ ರಿಪುಹರ್ತ । ಮುಕುತರ ಪುರುಷಾರ್ಥ
ಹೃಷ್ಟ ಪುಷ್ಟ ಪರಮೇಷ್ಠಿ ಜನಕ । ಶಿಷ್ಟೇಷ್ಟ ದ್ರಷ್ಟ ಅನಿವಿಷ್ಟ ನಿವಿಷ್ಟ
ಚಾ ವೆಂಕಟ ಶೈಲಾಧಿಪ ಮನ್ಮನಕೆ । ತಡ ಮಾಡುವುದೇಕೆ,

**ಶ್ರೀ ಜಗನ್ನಾಥದಾಸರು**

## 6. ಆರಂಭಣಾಧಿಕರಣ

1. **ಓಂ ತದ ನನ್ಯತ್ವಂ, ಆರಂಭಣ ಶಬ್ದಾದಿಭ್ಯಃ ಓಂ || ೧೫ ||**
2. **ಓಂ ಭಾವೇ ಚೋಪಲಬ್ಧೇಃ ಓಂ || ೧೬ ||**

3. ಓಂ ಸತ್ವಾಚ್ಚಾವರಸ್ಯ ಓಂ || ೧೭ ||

4. ಓಂ ಅಸದ್ವ್ಯಪದೇಶಾನ್ನೇತಿ ಚೇನ್ನ ಧರ್ಮಾಂತರೇಣ ವಾಕ್ಯಶೇಷಾತ್ ಓಂ || ೧೮ ||

5. ಓಂ ಯುಕ್ತೇಃ ಶಬ್ದಾಂತರಾಚ್ಚ ಓಂ || ೧೯ ||

6. ಓಂ ಪಟವಚ್ಚ ಓಂ || ೨೦ ||

7. ಓಂ ಯಥಾ ಪ್ರಾಣಾದಿಃ ಓಂ || ೨೧ ||

ವಿಷ್ಣುವಿಗೆ ಜಗತ್ಕರ್ತೃತ್ವ ಸಾಧಿಸುತ್ತಾ ಬ್ರಹ್ಮನಿಗೆ ಸ್ವತಂತ್ರತ್ವ ಇಲ್ಲದ ಕಾರಣ, ವಿಷ್ಣುವಿಗೇನೇ ಜಗತ್ಕರ್ತೃತ್ವ ಸಿದ್ಧಿಸುವುದು. ವೇದಾಧಾರರೀತ್ಯ ಅದು ಅನ್ಯರಿಗಲ್ಲ, ಪ್ರಳಯಕಾಲವಲ್ಲಿ ಇದ್ದವನು ವಿಷ್ಣು ಒಬ್ಬನೇ ಹೊರತು ಅನ್ಯರಿಲ್ಲದ ಕಾರಣ ಅವನೇ ಸಕಲಕ್ಕೂ ಮೂಲ ಕಾರಣ. "ಅಸತ್ಯಮಪ್ರತಿಷ್ಠಂತೇ ಜಗದಾಹುರ ನೀಶ್ವರಂ (ಗೀತ 16.8) ಅಸುರರು ಜಗತ್ತನ್ನು ಮಿಥ್ಯಾ ಎನ್ನುವರು. ಶ್ರೀಹರಿ ಸತ್ಯಜಗತ್ತನ್ನು ಸೃಷ್ಟಿಸಿ ಸತ್ಯ ಕರ್ತೃ ಎನಿಸಿಕೊಳ್ಳುತ್ತಾನೆ. ಆದ್ದರಿಂದ ಪರಮಾತ್ಮನು ಸ್ವತಂತ್ರವಾಗಿ ಸತ್ಯ ಜಗತ್ತನ್ನು ಅವನೇ ಸೃಷ್ಟಿಸಿ ಜಗತ್ಕರ್ತ ಎನಿಸಿಕೊಳ್ಳುವನು.

**ದಾಸಸಾಹಿತ್ಯ :-**

ಸತ್ಯಜಗಕಿದು ಪಂಚಭೇದವು ನಿತ್ಯ ಶ್ರೀ ಗೋವಿಂದನಾ । ಕೃತ್ಯತಿಳಿದು ತಾರ-ತಮ್ಯದಿ ಕೃಷ್ಣನಧಿಕನೆಂದು ಸಾರಿರೈ ।

[ಶ್ರೀ ಪುರಂದರದಾಸರು]

ಸೃಷ್ಟ್ಯಾದಿ ಕರ್ತ ತ್ರಿಜಗದ್ಭರ್ತ । ಲೋಕೈಕ ಸಮರ್ಥ
ವೃಷ್ಣೀಶ ವೃಂದಾರಕ ರಿಪುಹರ್ತ । ಮುಕುತರ ಪುರುಷಾರ್ಥ
ಹೃಷ್ಟ ಪುಷ್ಟ ಪರಮೇಷ್ಠಿ ಜನಕ । ಶ್ರೇಷ್ಠೇಷ್ಟ ದ್ರಷ್ಟ ಅನಿವಿಷ್ಟ ನಿವಿಷ್ಟ ॥

(ಶ್ರೀ ಜಗನ್ನಾಥದಾಸರು)

## 7. ಇತರ ವ್ಯಪದೇಶಾಧಿಕರಣ

**ಸೂತ್ರಗಳು :-**

1. ಓಂ ಇತರವ್ಯಪದೇಶಾತ್ ಹಿತಾಕರಣಾದಿ ದೋಷಪ್ರಸಕ್ತಿಃ ಓಂ || ೨೨ ||

2. ಓಂ ಅಧಿಕಂ ತು ಭೇದನಿರ್ದೇಶಾತ್ ಓಂ || ೨೩ ||

3. ಓಂ ಅಶ್ಮಾದಿವಚ್ಚ ತದನುಪಪತ್ತಿಃ ಓಂ || ೨೪ ||

4. ಓಂ ಉಪಸಂಹಾರ ದರ್ಶನಾನ್ನೇತಿ ಚೇತ್, ಕ್ಷೀರವದ್ಧಿ ಓಂ || ೨೪ ||

5. ಓಂ ದೇವಾದಿವದಪಿ ಲೋಕೇ ಓಂ || ೨೫ ||

6. ಓಂ ಕೃತ್ಸ್ನ ಪ್ರಸಕ್ತಿರ್ನಿರವಯವತ್ವ ಶಬ್ದ-
ಕೋಪೋ ವಾ ಓಂ || ೨೬ ||

ಜೀವನೇ ಸ್ವತಂತ್ರ ಕರ್ತೃ ಎನ್ನುವುದಾದರೆ ತನಗೆ ಬೇಕಾದ ಹಿತವನ್ನು ಏಕೆ ಮಾಡಿಕೊಳ್ಳಲಾರ ಎಂಬ ಪ್ರಶ್ನೆ ಇದೆ. ಹಾಗೂ ಅವನಿಗೆ ಬೇಡವಾದ ಅಹಿತಕಾರ್ಯ ನಡೆಯುವುದಲ್ಲ. ಸ್ವತಂತ್ರಕರ್ತ ಜೀವನಾದರೆ ಅವನಲ್ಲಿ ಅನೇಕ ದೋಷಗಳಿವೆ. ಜೀವನದೇಹದಲ್ಲಿ ನಡೆಯುವ, ಪಚನಾದಿ ಕಾರ್ಯಗಳೆಲ್ಲಾ ಅವನ ಅಧೀನದಲ್ಲೇ ಇಲ್ಲದೇ ಹರಿಯ ಅಧೀನವಾಗಿರುವುದು ವಿದಿತವಾಗಿದೆ. ಆದ್ದರಿಂದ ಸಕಲಕ್ಕೂ ಶ್ರೀ ಹರಿಯೇ ಸ್ವತಂತ್ರ ಕರ್ತೃವಾಗಿ ಕಾರ್ಯ ಮಾಡುವನೆಂಬುದು ನಿರ್ಣೀತವಾದ ಸಿದ್ಧಾಂತ ಆದ್ದರಿಂದ ಶ್ರೀ ಹರಿಯೇ ಸಕಲಕ್ಕೂ ಸ್ವತಂತ್ರ ಕರ್ತ, ಜೀವ ಕೇವಲ ಪರಾಧೀನ-ನಾದವನು.

**ದಾಸಸಾಹಿತ್ಯ .-**

ಇಂದಿರಾಪತಿ ನೀನು, ಮಂದ ಭಾಗ್ಯನು ನಾನು । ವಂದ್ಯನೋ ನೀನು ಸುರರಿಂದ ನರರಿಂದ ನಿಂದ್ಯನೋ ನಾನು ಎಂದೆಂದು ॥

(ತತ್ವಸುವಾಲಿ-ಶ್ರೀ ಜಗನ್ನಾಥದಾಸರು)

ನಿನ್ನ ಸೂತ್ರದೊಳಾಡುವುವು ಚೈ । ತನ್ಯ ಸಚರಾಚರಗಳೆಲ್ಲವು । ನಿನ್ನ ಸೂತ್ರವು ತಪ್ಪಿದರೆ ಮೊಗ್ಗುವುವು ಊಹೆಗಳು ॥ ಇನ್ನು ನಮಗೆ ಸ್ವತಂತ್ರವೆಲ್ಲಿಯ । ದನ್ಯ ಕರ್ಮ ಸುಕಮ್ಮವೆಲ್ಲವು । ನಿನ್ನದೆಂದೊಪ್ಪಿಸಿದೆ ರಕ್ಷಿಸು ನಮ್ಮ ನನವರತ ॥

[ಹರಿಭಕ್ತಿಸಾರ ಶ್ರೀ ಕನಕದಾಸರು]

ನೀನಲ್ಲದೆನಗೆ ಗತಿಯಿಲ್ಲ, ವವ । ಮಾನವವಂದಿತ ಕೇಳೋ ಸೊಲ್ಲಿ, ಎನ್ನ ಜ್ಞಾನೇ-ಚ್ಛೆ ಕ್ರಿಯಂಗಳೆಲ್ಲ. ನಿನ್ನ ಅಧೀನವಲ್ಲದೆ, ಲಕ್ಷ್ಮೀಸಲ್ಲ ॥ ಶ್ರೀ ವೆಂಕಟಾಚಲನಿವಾಸ, ನಿನ್ನ ಸೇವಕರ ಸೇವಕರ ದಾಸಾನುದಾಸ ॥

(ಶ್ರೀ ಜಗನ್ನಾಥದಾಸರು)

## 8. ಶ್ರುತ್ಯಧಿಕರಣ

**ಸೂತ್ರಗಳು :-**

1. ಓಂ ಶ್ರುತೇಸ್ತು, ಶಬ್ದಮೂಲತ್ವಾತ್ ಓಂ || ೨೮ ||

2. ಓಂ ಅತ್ಮನಿ ಚೈವಂ ವಿಚಿತ್ರಾಶ್ಚ ಹಿ ಓಂ || ೨೯ ||

3. ಓಂ ಸ್ವಪಕ್ಷದೋಷಾಚ್ಚ ಓಂ || ೩೦ ||

4. ಓಂ ಸರ್ವೋಪೇತಾ ಚ, ತದ್ದರ್ಶನಾತ್ ಓಂ || ೩೦ ||

5. ಓಂ ವಿಕರಣತ್ವಾನ್ನೇತಿ ಚೇತ್, ತದುಕ್ತಮ್ ಓಂ || ೩೨ ||

ವಿಷ್ಣುವು ಸರ್ವಕರ್ತೃವು ಹಾಗೂ ಸರ್ವ ಪ್ರವರ್ತಕನು. ಶ್ರೀಹರಿಗಿರುವ ವಿಚಿತ್ರ ಶಕ್ತಿ ಇತರರಿಗಿಲ್ಲ. ಜೀವಿಯಾದವನು ದೋಷಿ, ಆದರೆ ಪರಮಾತ್ಮನು ನಿರ್ದೋಷಿ ಹಾಗೂ ಅನಂತ ಕಲ್ಯಾಣಗುಣ ಪರಿಪೂರ್ಣನು ಮತ್ತು ಜಗತ್ಕರ್ತೃವು, ಪರಮಾತ್ಮನು ಶುಷ್ಕ ತರ್ಕಕ್ಕೆ ಅಗೋಚರನಾದವನು.

**ದಾಸಸಾಹಿತ್ಯ :-**

ನಿಗಮತತಿಗಳಿಗೆ ವೇದ್ಯವಾದ ನಿನ್ನ । ಅಗಣಿತ ಮಹಿಮೆ ಲಕುಮಿ ಬೊಮ್ಮ-ಭವಾ-| ದಿಗಳು ತಾವರಿಯವರು ಸಾಕಲ್ಯ ಮಂದ ಜೀ-| ವಿಗಳಿಗೆ ಗೋಚರಿಸುವುದೆ ನಿನ್ನ ರೂಪ | ಭಗವಂತ ನೀನೆ ದಯಾಳುವೆಂದರಿದು ನಾ-। ಪೊಗಳಿದೆನೊ ಯಥಾ-ಮತಿಯೊಳಿಗೆ.....

(ಶ್ರೀ ಜಗನ್ನಾಥದಾಸರು - ಶ್ರೀನರಸಿಂಹ ಸುಳಾದಿ)

## 9. ನ ಪ್ರಯೋಜನವತ್ವಾಧಿಕರಣ

1. ಓಂ ನ ಪ್ರಯೋಜನವತ್ತ್ವಾತ್ ಓಂ || ೩೩ ||

2. ಓಂ ಲೋಕವತ್ತು ಲೀಲಾಕೈವಲವಮ್ ಓಂ || ೩೪ ||

ಜಗತ್ ಕರ್ತೃತ್ವಾದಿ ಕಾರಣನಾದ ವಿಷ್ಣುವಿಗೆ ಯಾವ ಪ್ರಯೋಜನ ಉದ್ದೇಶ ವಿಲ್ಲ. ಲೀಲಾ ವಿನೋದವಾಗಿ ಎಲ್ಲಾ ಕಾರ್ಯವನ್ನೂ ನಮಗಾಗಿ ಮಾಡುತ್ತಾನೆ.

**ದಾಸಸಾಹಿತ್ಯ :-**

ಸತ್ಯಸುಕಲ್ಪಾನುಸಾರ ಪ್ರ । ವರ್ತಿಸುವ ಪ್ರಭು ತನಗೆ ತಾನೇ ।
ಭೃತ್ಯನೆನಿಸುವ ಭೋಕ್ತೃ ಭೋಗ್ಯ ಪದಾರ್ಥದೊಳಗಿದ್ದು ||
ತತ್ತದಾಹ್ವಯನಾಗಿ ತರ್ಪಕ । ತೃಪ್ತಿಪಡಿಸುವ ತತ್ವಪ್ರತಿಗಳ ।
ಮತ್ತರಾದಸುರರ್ಗೆ ಅಸಮೀಚೀನ ಫಲವೀವ ||

(ಹರಿಕಥಾಮೃತಸಾರ)

ನೀ ಸ್ವತಂತ್ರನು ನಿನಗೆ ಬೇಕು ಬೇಡೆಂಬುದಿಲ್ಲ
ಈಸಥೆ ಮಾತು ನೀನೇ ಕೊಟ್ಟಿದಲ್ಲಾ
ಈಷಣತ್ರಯದಲ್ಲಿ ಎಳೆವೆನ್ನ ಮನಸ

ರ್ವೇಶನೆ ನಿನ್ನ ಕಡೆಮಾಡಬಹುದೊ
ನಾಶರಹಿತ ಶ್ರೀಶ ಗೋಪಾಲವಿಠ್ಠಲ
ಶಾಶ್ವತವಾಗಿ ವಾಸವಾದಮೂರುತಿ

**(ಸುಳಾದಿ ಶ್ರೀ ಗೋಪಾಲದಾಸರು)**

## 10. ವೈಷಮ್ಯನೈ ರ್ಘೃಣ್ಯಾಧಿಕರಣ

**ಸೂತ್ರಗಳು :-**

**1. ಓಂ ವೈಷಮ್ಯನೈರ್ಘೃಣ್ಯೇ ನ, ಸಾಪೇಕ್ಷತ್ವಾತ್,
ತಥಾ ಹಿ ದರ್ಶಯತಿ ಓಂ || ೩೫ ||**

**2. ಓಂ ನ ಕರ್ಮಾವಿಭಾಗಾದಿತಿ ಚೇನ್ನ, ಅನಾದಿತ್ವಾತ್ ಓಂ || ೩೬ ||**

**3. ಓಂ ಉಪಪದ್ಯತೇ ಚಾಪ್ಯುಪಲಭ್ಯತ್ತೇ ಚ ಓಂ || ೩೭ ||**

ಪರಮಾತ್ಮನಿಗೆ ಸರ್ವ ಸ್ವಾತಂತ್ರ್ಯವಿರೋದರಿಂದ ಒಬ್ಬರಿಗೆ ಸುಖ ಇನ್ನೊಬ್ಬರಿಗೆ ದಃಖಾದಿಗಳನ್ನು ಕೊಡುವುದರಿಂದ ವೈಷಮ್ಯನೈಘೃಣ್ಯಾದಿಗಳು ಬರುವುದಿಲ್ಲವೇ ಅಂದರೆ ಹಾಗೆ ತಿಳಿಯಬಾರದು. ಕೇವಲ ಕರ್ಮಾಕ್ಕನುಗುಣ ಫಲವನ್ನುಮಾತ್ರ ಕೊಡುವನೆಂದಲ್ಲ. ಪರಮಾತ್ಮನು ಅನಾದಿ ಪ್ರವಾಹದಂತಿರುವ ಕರ್ಮಾಕ್ಕೂ ಮೇಲೆ ನಿಯಮಕನಾಗಿರುತ್ತಿದ್ದಾನೆ. ಆದ್ದರಿಂದ ಕೇವಲ ಕರ್ಮಾಕ್ಕನುಗುಣ ಫಲವನ್ನೇ ಕೊಡುತ್ತಾನೆಂದಲ್ಲ. ಅವವ ಇಚ್ಛಾ ಪ್ರಕಾರ ಫಲದಾಯಕನಾದ ಸ್ವತಂತ್ರಮೂರ್ತಿ ಪರಮಾತ್ಮ.

**ದಾಸಸಾಹಿತ್ಯ:-**

ನಿನ್ನ ಸಂಕಲ್ಪಾನುಸಾರ ಮಾಡು || ಪ ||
ಎನ್ನಸಾಕುವ ಧೊರೆಯ ಮಾನ್ಯ ಮಾನದಾಸೆ
ಪಾತ್ರನೆಂದೆನಿಸು ಪಾಪಾತ್ಮನೆಂದೆನಿಸು ಎನ್ನ
ಶ್ರೋತ್ರಿಯನೆಂದೆನಿಸು ಬಹುಶುಂದನೆನಿಸು
ಪುತ್ರಮಿತ್ರಾದ್ಯರಿಂಬೈಸು ಪೂಜೆಯ ನಡೆಸು

ಕರ್ತೃನೇ ಜಗಕೆ ಸರ್ವರ್ತ್ರವ್ಯಾಪಕನೆ
ಜನರೊಳಗೆ ನೀನಿದ್ದು-ಜನುಮ ಜನುಮಗಳಲ್ಲಿ
ಗುಣಕಾಲ ಕರ್ಮ ಸ್ವಭಾವಂಗಳ
ಅನುಸರಿಸಿ ಪುಣ್ಯಪಾಪಗಳ ಮಾಡಿಸಿ ಫಲಗ
ಳುಣಿಸಿ ಮುಕ್ತರಮಾಡಿ ಪೊರೆವ ಕರುಣಾಳು || ೨ ||

**(ಶ್ರೀ ಜಗನ್ನಾಥದಾಸರು)**

ಮುನ್ನ ಮಾಡಿದ ಕರ್ಮ ಬೆನ್ನ ಬಿಡದಿದ್ದರೆ
ನಿನ್ನ ಪಾಲ್ಯೆಸಲ್ಯಾಕೆ ಗೋವಿಂದ ।
ದುರಿತಗಜ ಪಂಚಾನನ ನರ-| ಹರಿಯೇದೇವರ ದೇವ
ಕಾಯೋಗೋವಿಂದ ॥

## 11. ಸರ್ವಧರ್ಮೋಪಪತ್ತ್ಯಧಿಕರಣ

**ಸೂತ್ರ :–**

**ಓಂ ಸರ್ವಧರ್ಮೋಪಪತ್ತೇಶ್ಚ ಓಂ** ॥ ೩೮ ॥

ಶ್ರೀಹರಿಯು ಸರ್ವಗುಣ ಪರಿಪೂರ್ಣನು, ಸರ್ವದೋಷ ದೂರನು

**ದಾಸಸಾಹಿತ್ಯ :–**

ಶ್ರೀರಮಣ ಸರ್ವೇಶ ಸರ್ವಗ
ಸಾರಾಭೋಕ್ತ ಸ್ವತಂತ್ರ ದೋಷಪ-
ದೂರಜ್ಞಾನಾನಂದ ಬಲ ಐಶ್ವರ್ಯ ಪರಿಪೂರ್ಣ ॥
ಮೂರುಗುಣ ವರ್ಜಿತ ಗುಣ ಸಗುಣ ಸಾ
ಕಾರ ವಿಶ್ವಸ್ಥಿತಿಲಯೋದಯ
ಕಾರಣ ಕೃಪಾಸಂದ್ರ ನರಹರೇ ಸಲಹೋ ಸಜ್ಜನರ

**(ಶ್ರೀ ಹರಿಕಥಾಮೃತಸಾರ)**

-0-0-0-0-

## ದ್ವಿತೀಯಾಧ್ಯಾಯ – ದ್ವಿತೀಯಪಾದ

### 1. ರಚನಾಧಿಕರಣ

1. **ಓಂ ರಚನಾನುಪಪತ್ತೇಶ್ಚ ನಾನುಮಾನಮ್ ಓಂ** ॥ ೧ ॥
2. **ಓಂ ಪ್ರವೃತ್ತೇಶ್ಚ ಓಂ** ॥ ೨ ॥
3. **ಓಂ ಪಯೋಂಬುವಚ್ಚೇತ್, ತತ್ರಾಪಿ ಓಂ** ॥ ೩ ॥
4. **ಓಂ ವ್ಯತಿರೇಕಾನವಸ್ಥಿತೇಶ್ಚಾನಪೇಕ್ಷತ್ವಾತ್ ಓಂ** ॥ ೪ ॥

ಕಪಿಲನ ನಿರೀಶ್ವರ ಸಾಂಖ್ಯಮತವನ್ನು ನಿರಾಕರಿಸುತ್ತಾ ಅಚೇನಕ್ಕ ಸ್ವಂತ ಪ್ರವೃತ್ತಿ ಕೊಡುವುದಿಲ್ಲ. "ನ ಋತೇ ತ್ವತ್ಕ್ರಿಯತೇ ಕಿಂಚನಾರೆ (ಋ) ಎಂಬ ಶ್ರುತಿಯಂತೆ ಈಶ್ವರ ಪ್ರೇರಣೆ ಇಲ್ಲದೇ ಯಾವಕ್ರಿಯವೂ ನಡೆಯಲಾರದು ಹಾಲು ಮೊಸರಾಗಲಿ, ನದಿ ನೀರು ಹರಿಯಲೂಕೂಡ ಪರಮಾತ್ಮನ ಆಜ್ಞೆಬೇಕು.

**ದಾಸಸಾಹಿತ್ಯ :-**

ಕಾಲ ದೇಶ ವಿದ್ಯ ಪ್ರಕೃತಿಕಾರ್ಯ ಕಾರಣ ಸಂಸ್ಕೃತಿ
ಮೂಲ ಜಾಲಂಗಳಿಗೆ ಮುಖ್ಯ ಮೂಲನೆಂದು ನಂಬಿದೆ
ಆಲಸ್ಯ ಸಲ್ಲದೋ ಭವಕೆ ಆರಿಗೆ ಮೊರೆಯಿಡುವೆನೋ
ಪಾಲಿಸುವುದುಚಿತ ಗುರುಗೋಪಾಲವಿಠಲವೆಂಕಟ
ಅನಘ ನಿನ್ನಂಘ್ರಿಸೇವೆ ಎನಗೆಂತು ದೊರಕುವುದೊ ॥ ಪ ॥

**[ಶ್ರೀ ಗುರುಗೋಪಾಲವಿಠಲರು]**

2. ಚೇತನನು ಅಹುದು ನೀ ಚೇಷ್ಟೆಯನು ಮಾಡಿಸಲು
ಅಚೇತನನು ಸರಿ ನೀನು ಸುಮ್ಮಸಿರಲು
ಯಾತರವ ನಾನಲ್ಲ, ನಿನ್ನಂಘ್ರಿ ನಡೆಯಲ್ಲ
ಚೇತನನಹುದು ನೀಚಲಿಸೆ ಚಲಿಸುವೆನು ॥ ೪ ॥
ಮೂಲಕಾರಣ ವಿಷ್ಣು ಸ್ವತಂತ್ರನೇ ಸತ್ಯ ॥ ಪ ॥
ಸಖ್ಯರ ಪೋಷ ಸಿರಿ ಅಜಭವ ಮರೇಶ ॥ ಅ ॥

**(ಶ್ರೀ ಗೋಪಾಲದಾಸರು)**

## 2. ಅನ್ಯತ್ರಾಭಾವಾಧಿಕರಣ

**ಸೂತ್ರ :- ಓಂ ಅನ್ಯತ್ರಾಭಾವಾಚ್ಚ ನ ತೃಣಾದಿವತ್ ಓಂ ॥ ೫ ॥**

ಪತಂಜಲಿಯ ಮತವಾದ ಸೇಶ್ವರಸಾಂಖ್ಯ ಮತವನ್ನು ನಿರಾಕರಿಸುತ್ತಾ ಈಶ್ವರ ಪ್ರೇರಣೆಇಲ್ಲದೇ ಯಾವ ವಸ್ತುಗಳೂ ಸತ್ವತ್ವನ್ನು ಹೊಂದುವುದಿಲ್ಲ. "ಯಚ್ಚ ಕಿಂಚಿಗಜತ್ಸರ್ವಂ" ಇತ್ಯಾದಿ ಶ್ರುತಿರೀತ್ಯ ಪ್ರಕೃತ್ಯಾದಿ ಕಾರಣಗಳ ಸತ್ತಾದಿ-ಗಳು ಪರಿಪೂರ್ಣ ಈಶ್ವರಾಧೀನ ಎಂದಾಗಿದ್ದರಿಂದ ಈಶ್ವರನಿಗೇನೇ ಜಗತ್ಕರ್ತೃತ್ವವು ಕೊಡುವುದು ಎಂದು ಸಾಂಖ್ಯಮತವನ್ನು ವಿರೋಧಿಸಿದರು.

**ದಾಸಸಾಹಿತ್ಯ :-**

ಎಲ್ಲಿನೋಡಲು ನೀನಿಲ್ಲದ ಸ್ಥಳವಿಲ್ಲ.
ಎಲ್ಲರಲ್ಲಿ ನೀನು ಎಲ್ಲ ಪ್ರೇರಕ ನೀನು
ಎಲ್ಲಕ್ಕೆ ಭೇದ ಎಲ್ಲಾ ನಿರ್ಲೇಪ
ಚಿಲ್ಲರೆ ದೈವರಗಂಡ ಗೋಪಾಲವಿಠಲ ನಿನ್ನ
ಬಲ್ಲವರೇ ಬಲ್ಲರು ಕಾಣೋ ಪೂರ್ಣರೇಯ

**[ಉಗಾಭೋಗ ಶ್ರೀ ಗೋಪಾಲದಾಸರು**

ಪ್ರತಿದಿವಸ ಶ್ರುತಿಸ್ಮೃತಿಗಳಿಂದ ಸಂ । ಸ್ತುತಿ ಸುತ ಲಕ್ಷ್ಮೀಪತಿ ಗುಣವ । ಕೃತಿ ಪತಿ ಸೃಷ್ಟಿ, ಸ್ಥಿತಿ. ಲಯ ಕಾರಣ । ಇತರ ದೇವತೆಗಳಿಗಿರೆಲ್ಲಾ ಎಂಬುದೇ, ಫಲವಿದು ಬಾಳ್ದುದಕೆ.

(ಶ್ರೀಜಗನ್ನಾಥದಾಸರು)

## 3. ಅಭ್ಯುಪಗಮಾಧಿಕರಣ

**ಸೂತ್ರ :- ಓಂ ಅಭ್ಯುಪಗಮೇ ಪ್ಯರ್ಥಾಭಾವಾತ್ ಓಂ** ॥ ೬ ॥

ಪ್ರತ್ಯಕ್ಷ ಒಂದೇ ಸರಿ ಎಂದು ಹೇಳುವ, ವೇದಾದಿಗಳನ್ನು ನಂಬದ ಚಾರುವಾಕರ ಮತವನ್ನು ನಿರಾಕರಿಸುತ್ತಾ ಅತೀಂದ್ರಿಯವಾದ ಪುಣ್ಯ ಪಾಪಾದಿಗಳನ್ನು ಒಪ್ಪದಿದ್ದರೆ ಪರಧನ. ಪರಸ್ತ್ರೀ ಮೊದಲಾದುವುಗಳಲ್ಲಿ ಪ್ರವರ್ತಿಸುವಾಗ ಪರಸ್ಪರ ಹಿಂಸಾದಿಗಳಿಂದ ಅಪಾಯ ಪ್ರಾಪ್ತವಾಗುವುದರಿಂದ ಚಾರುವಾಕರ ಮತಹಾನಿಕರ, ವಿಷ್ಣುವೇ ಸರ್ವೋ-ತ್ತಮನೆಂಬುದೇ ಶಾಸ್ತ್ರಸಮ್ಮತ.

**ದಾಸಸಾಹಿತ್ಯ :-**

ಏನು ಮಾಡುವ ಪುಣ್ಯಪಾಪಗ-
ಳಾನೆ ಮಾಡುವೆನೆಂಬುವಾಧಮ
ಓಇನ ಕರ್ಮಕೆ ಪಾತ್ರನಾ ಪುಣ್ಯಕ್ಕೆ ಪರಿಯೆಂಬ
ಮಾನವನು ಮಧ್ಯಮನ ದ್ವಂದ್ವಕ್ಕೆ
ಶ್ರೀನಿವಾಸನೆ ಕರ್ತೃನೆಂದು ಸ-
ದಾನುರಾಗದಿ ನೆನೆದು ಸುಖಿಸುವರೇ ನರೋತ್ತಮರು ॥

[ಹರಿಕಥಾಮೃತಸಾರ]

ಒಬ್ಬಾಚಾರ್ಯ ದೈವವೇ ಇಲ್ಲವೆಂದ
ಒಬ್ಬಾಚಾರ್ಯ ದೈವಕೆಂಟೇಗುಣವೆಂದ
ಒಬ್ಬಾಚಾರ್ಯ ನಿರ್ಗುಣ ನಿರಾಕಾರ ನಿರವಯವ ಎಂದ
ಕೊನೆಯಲ್ಲಿ ತಾನೇ ದೈವವೆಂದ, ಒಬ್ಬರೂ ವೇದಾರ್ಥವ-
ನ್ನರಿಯರ ಒಬ್ಬ ಮಧ್ವ ಮುನಿರಾಯನಲ್ಲದೆ.
ಪುರಂದರವಿಠಲ ದೇವಾದಿದೇವ ಎಂದವರಾಗಿ ತೋರಿದರು.

(ಶ್ರೀ ಪುರಂದರದಾಸರು)

## 4. ಪುರುಷಾರ್ಥಾಧಿಕರಣ

**ಸೂತ್ರಗಳು :-**

1. **ಓಂ ಪುರುಷಾರ್ಥವದಿತಿ ಚೇತ್, ತಥಾಪಿ ಓಂ** ॥ ೭ ॥
2. **ಓಂ ಅಂಗಿತ್ವಾನುಪಪತ್ತೇಃ ಓಂ** ॥ ೮ ॥

ನಿರೀಶ್ವರವಾದ ಹಾಗೂ ಅಚೇತನಕ್ಕೆ ಕರ್ತೃತ್ವ ಹೇಳುವ ಮತವನ್ನು ನಿರಾಕರಿಸುತ್ತಾ "ನಯತೇ" ಎಂಬ ಶ್ರುತಿಯಂತೆ ಈಶ್ವರನಿಗೇನೇ ಕರ್ತೃತ್ವ ಕೊಡುವುದು, ಎಂದು ಸಾಧಿಸಿದ್ದಾರೆ.

**ದಾಸಸಾಹಿತ್ಯ :-**

ಪಚನಭಕ್ಷಣಗಮನಭೋಜನ-
ವಚನಮೈಥುನಶಯನವೀಕ್ಷಣ
ಅಚಲನ ಚಲನ ಪ್ರಯತ್ನವು ಸಾಧ್ಯವೇ ಜನಕೆ ।
ಶುಚಿಸದನ ದಯದಿಂದೆ ಜೀವರ
ನಿಚಯದೊಳು ತಾ ನಿಂತು ಮಾಡುವ
ನುಚಿತವನೋಚಿತಕರ್ಮಗಳನೆಂದರಿದು ಕೊಂಡಾಡು ॥

(ಹರಿಕಥಾಮೃತಸಾರ)

## 5. ಅನ್ಯಥಾನುಮಿತ್ಯಧಿಕರಣ

**ಸೂತ್ರಗಳು :-**

**1. ಓಂ ಅನ್ಯಥಾನುಮಿತೌ ಚ ಜ್ಞಶಕ್ತಿವಿಯೋಗಾತ್ ಓಂ ॥ ೯ ॥**

**2. ಓಂ ವಿಪ್ರತಿಷೇಧಾಚ್ಚಾಸಮಂಜಸಮ್ ಓಂ ॥ ೧೦ ॥**

ಜೀವನಿಗೆ ಶರೀರ ಸಂಬಂಧ ಪ್ರವರ್ತಿಸಲು ಅವಶ್ಯವಾದ ಕಾರಣ, ಶರೀರ ಸಂಬಂಧಕ್ಕಾಗಿ ಈಶ್ವರನನ್ನು ಅಂಗೀಕರಿಸಬೇಕಾಗುವುದು ಎಂದು ಸಿರೀಶ್ವರ ಸಾಂಖ್ಯಿಕ ಮತವನ್ನು ನಿರಾಕರಿಸಿರುತ್ತಾರೆ.

**ದಾಸಸಾಹಿತ್ಯ :-**

ವಿಷ್ಟರಶ್ರವ ದೇಹದೊಳಗೆ ಪ್ರ-। ವಿಷ್ಟನಾಗಿ ನಿರಂತರದಿ ಬಹು-
ಚೆಷ್ಟೆಗಳ ಮಾಡುತಿರೆ ಕಂಡು ಸಜೀವಿ ಎನ್ನುತಿಹರು ।
ಹೃಷ್ಟರಾಗುವರ ವನ ನೋಡಿ ಕ-। ನಿಷ್ಟರಲ್ಲರು ಸೇವೆ ಮಾಳ್ಪರು
ಬಿಟ್ಟಕ್ಷಣದಲಿ ಕುಣಪನೆಂದಲದದನುಪೇಕ್ಷಿಪರು ॥

(ಹರಿಕಥಾಮೃತಸಾರ)

## 6. ವೈಶೇಷಿಕಾಧಿಕರಣ

**ಸೂತ್ರಗಳು :-**

**1. ಓಂ ಮಹದ್ದೀರ್ಘವದ್ವಾ ಹ್ರಸ್ವಪರಿಮಂಡಲಾಭ್ಯಾಮ್ ಓಂ ॥ ೧೧ ॥**

**2. ಓಂ ಉಭಯಥಾಪಿ ನ ಕರ್ಮ, ಅತಸ್ತದಭಾವಃ ಓಂ ॥ ೧೨ ॥**

3. ಓಂ ಸಮವಾಯಾಭ್ಯುಪಗಮಾಚ್ಚ,
ಸಾಮ್ಯಾದವಸ್ಥಿತೇಃ ಓಂ || ೧೩ ||

4. ಓಂ ನಿತ್ಯಮೇವ ಚ, ಭಾವಾತ್ ಓಂ || ೧೪ ||

5. ಓಂ ರೂಪಾದಿಮತ್ತ್ವಾಚ್ಚ
ವಿಪರ್ಯಯಃ, ದರ್ಶನಾತ್ ಓಂ || ೧೫ ||

6. ಓಂ ಉಭಯಥಾ ಚ ದೋಷಾತ್ ಓಂ || ೧೬ ||

7. ಓಂ ಅಪರಿಗ್ರಹಾಚ್ಚಾತ್ಯಂತಮನಪೇಕ್ಷಾ ಓಂ || ೧೭ ||

ವೈಶೇಷಿಕರ ಮತವನ್ನು ನಿರಾಕರಿಸುತ್ತಿದ್ದಾರೆ. ಪರಮಾತ್ಮನಿಗೆ ಎಂಟೇಗುಣಗಳು ಕೊಡುತ್ತಲಿವೆ. ಆದರೆ ಜೀವನಿಗೆ ಇನ್ನೂ ಹೆಚ್ಚಿಗೆ ಗುಣವಿದೆ ಇತ್ಯಾದಿ ಅಶಾಸ್ತ್ರೀಯ ವಾದವನ್ನು ನಿರಾಕರಿಸಿ, ಅವರ ಮತದಲ್ಲಿ ಪ್ರಳಯವೂ ಕೂಡುವುದಿಲ್ಲ ಎಂದಿದ್ದಾರೆ, ಹಾಗೆಯೇ ಪರಮಾಣುಗಳು ಸತ್ಯ ಎಂಬುದೂ ಕೂಡುವುದಿಲ್ಲ ಎಂದಿದ್ದಾರೆ. ಶ್ರೀಮದಾಚಾರ್ಯರು ಇನ್ನೂ ಅನೇಕ ನ್ಯೂನತೆ ಇರುವ ವೈಶೇಷಿಕರಮತವನ್ನು ನಿರಾಕರಿಸಿ ದ್ವೈತಮತವೇ ವೇದಸಮ್ಮತವಾದ ಮತವೆಂದು ಧೃಡೀಕರಿಸಿರುತ್ತಾರೆ. ವಿಷ್ಣುವೇ ಅನಂತ ಗುಣ ಪರಿಪೂರ್ಣ ಎಂದು ತೋರಿಸಿರುತ್ತಾರೆ.

**ದಾಸಸಾಹಿತ್ಯ :-**

ಒಬ್ಬಾಚಾರ್ಯನು ದೈವವೇ ಇಲ್ಲವೆಂದ
ಒಬ್ಬಾಚಾರ್ಯನು **ದೈವಕೆಂಟೇ ಗುಣವೆಂದ**
ಒಬ್ಬಾಚಾರ್ಯನು ನಿರ್ಗುಣ ನಿರಾಕಾರ, ನಿರವಯದ ಎಂದ
ಕೊನೆಯಲ್ಲಿ ತಾನೇ ದೈವವೆಂದ.
ಒಬ್ಬರೂ ವೇದಾರ್ಥವನ್ನರಿಯರ ಒಬ್ಬ ಶ್ರೀಮನ್ ಮಧ್ವಮುನಿರಾಯ
ನಲ್ಲದೇ. ಪುರಂದರ ದೇವಾದಿ ದೇವ ಎಂದಿಳೆಗೆ ಅವರಾಗಿ ತೋರಿದರು.

**(ಶ್ರೀ ಪುರಂದರದಾಸರು)**

## 7. ಸಮುದಾಯಾಧಿಕರಣ

**ಸೂತ್ರಗಳು :-**

1. ಓಂ ಸಮುದಾಯ ಉಭಯಹೇತುಕೇಽಪಿ
ತದಪ್ರಾಪ್ತಿಃ ಓಂ || ೧೮ ||

2. ಓಂ ಇತರೇತರಪ್ರತ್ಯಯತ್ವಾದಿತಿ ಚೇನ್ನ,
ಉತ್ಪತ್ತಿಮಾತ್ರನಿಮಿತ್ತತ್ವಾತ್ ಓಂ || ೧೯ ||

3. ಓಂ ಉತ್ತರೋತ್ಪಾದೇ ಚ ಪೂರ್ವನಿರೋಧಾತ್ ಓಂ || ೨೦ ||

4. ಓಂ ಅಸತಿ ಪ್ರತಿಜ್ಞೋಪರೋಧಃ
ಯೌಗಪದ್ಯಮನ್ಯಥಾ ಓಂ ॥ ೨೦ ॥

5. ಓಂ ಪ್ರತಿಸಂಖ್ಯಾ ಪ್ರತಿಸಂಖ್ಯಾನಿರೋಧಾಪ್ರಾಪ್ತಿಃ
ಅವಿಚ್ಛೇದಾತ್ ಓಂ ॥ ೨೨ ॥

6. ಓಂ ಉಭಯಥಾ ಚ ದೋಷಾತ್ ಓಂ ॥ ೨೩ ॥

7. ಓಂ ಆಕಾಶೇ ಚ, ಅವಿಶೇಷಾತ್ ಓಂ ॥ ೨೪ ॥

8. ಓಂ ಅನುಸ್ಮೃತೇಶ್ಚ ಓಂ ॥ ೨೫ ॥

ಬೌದ್ಧರ, ಪಾಷಂಡ ಮತಗಳಾದ ವೈಭಾಷಿಕ. ಸೌತ್ರಾಂತಿಕರ ಮತಗಳನ್ನು ಅವರುಗಳು ಅನುಪಪನ್ನ ಭಾಷಿಗಳಾದ್ದರಿಂದ ಖಂಡಿಸುತ್ತಾ ವಿಷ್ಣುವಿನಲ್ಲಿ ಸರ್ವಕರ್ತೃತ್ವವನ್ನು ಸಮರ್ಥಿಸುತ್ತಲ್ಲಿದ್ದಾರೆ. "ಏಕಸ್ಮಾತ್ ಸಮುದಾಯ" "ಅಸತಿಪ್ರತಿಜ್ಞಾ" ಇತ್ಯಾದಿ ಸೂತ್ರಗಳಂತೆ ಪ್ರತಿಕ್ಷಣದಲ್ಲಿ ಉತ್ಪತ್ತಿವಿನಾಶಾಧಿಗಳು ಅಣುವಿಗೆ ಕೂಡದ ಕಾರಣ ಕ್ಷಣಿಕತ್ವವೂ ಕೂಡುವುದಿಲ್ಲ "ಉಭಯಥಾಚ" ಎನ್ನುವ ಸೂತ್ರರೀತ್ಯ "ತದೇ-ವೇದಂ" ಎನ್ನುವ ಪ್ರತಿಜ್ಞೆಯಿಂದ ಅನುಮಾನವು ಬಾಧಿತವಾದ ಕಾರಣ ಅವರ ಮತದ ಪ್ರಕಾರ ಕ್ಷಣಿಕತ್ವವು ಅಪ್ರಮಾಣಿಕವೇ ಆಯಿತು ಎಂದು ನಿರಾಕರಿಸಿದರು.

**ದಾಸಸಾಹಿತ್ಯ :-**

1. ಹಿಂದಿನ ಅಧಿಕರಣದ ಶ್ರೀ ಪುರಂದರದಾಸರ "ಒಬ್ಬಾಚಾರ್ಯನು ದೈವವೇ ಇಲ್ಲವೆಂದ" ಎಂಬ ಉಗಾಭೋಗ ಇಲ್ಲಿಯೂ ಕೂಡುತ್ತಿದೆ.

2. ಪರಮಾತ್ಮನಿಗಿರುವ ಸರ್ವಕರ್ತೃತ್ವವನ್ನು ಹೀಗೆ ತಿಳಿಸಿರುತ್ತಾರೆ

ಚೇತನಾಚೇತನ ಜಗತ್ತಿನೊ-
ಳಾತನು ತಾನಾಗಿ ಲಕುಮೀ-
ನಾಥ ಸರ್ವರೊಳಿಪ್ಪ ತತ್ತದ್ರೂಪಗಳ ಧರಿಸಿ ।
ಜಾತಿಕಾರನ ತೆರದಿ ಎಲ್ಲರ
ಮಾತಿನೊಳಗಿದ್ದಖಿಳ ಕರ್ಮವ
ತಾ ತಿಳಿಸಿಕೊಳ್ಳದಲೆ ಮಾಡಿಸಿ ನೋಡಿ ನಗುತ್ತಿಪ್ಪ ॥

(ಶ್ರೀ ಹರಿಕಥಾಮೃತಸಾರ)

## 8. ಅಸದಧಿಕರಣ

**ಸೂತ್ರಗಳು :-**

1. ಓಂ ನಾಸತಃ, ಅದೃಷ್ಟತ್ವಾತ್ ಓಂ ॥ ೨೬ ॥

2. ಓಂ ಉದಾಸೀನಾನಾಮಪಿ ಚೈವಂ ಸಿದ್ಧಿಃ ಓಂ ॥ ೨೭ ॥

3. ಓಂ ನಾಭಾವಃ, ಉಪಲಬ್ಧೇಃ ಓಂ || ೨೮ ||

4. ಓಂ ವೈಧರ್ಮ್ಯಾಚ್ಚ ನ ಸ್ವಪ್ನಾದಿವತ್ ಓಂ || ೨೯ ||

ಶೂನ್ಯವೇ ಜಗತ್ಕಾರಣ ಎನ್ನುವ ಮಾಧ್ಯಮಿಕರನ್ನು ನಿರಕರಿಸುತ್ತಾರೆ. ಶೂನ್ಯವೇ ಜಗದಾಕಾರವಾಗ ತೋರುವುದು, ವಸ್ತುತಃ ಜಗತ್ತು ಇಲ್ಲ ಎನ್ನುವ ಸಿದ್ಧಾಂತ "ಸನ್‌ಘಟಃ" ಇತ್ಯಾದಿ ಅಭಾಧಿತ ಪ್ರತ್ಯಕ್ಷಾದಿಗಳಿಂದ ಭಾಧಿತವಾದ ಪ್ರಯುಕ್ತ ಕೂಡುವುದಿಲ್ಲ. ಸರ್ವಕತೃತ್ವವು ವಿಷ್ಣುವಿಗೇ ಸೇರಕ್ಕದ್ದು.

**ದಾಸಸಾಹಿತ್ಯ :-**

1. "ಒಬ್ಬಾಚಾರ್ಯದ್ವೆವವೇ ಇಲ್ಲವೆಂದ" ಎಂಬ ಉಗಾಭೋಗ ಇಲ್ಲಿಗೂ ಅನು-ಗುಣವಾಗುತ್ತಿದೆ.

[ಶ್ರೀ ಪುರಂದರದಾಸರು]

2. ವೇದ ಅಪ್ರಮಾಣ್ಯವೆಂದು ಸುಜನರೆಲ್ಲರಿಗೆ
ಭೋಧಿಸುತ್ತಿಪ್ಪ ಬೌದ್ಧನ ಕೋಲೆ |
ಬೋಧಿಸುತ್ತಿಪ್ಪ ಬೌದ್ಧನ ಎಳೆದೊಯ್ದು
ಕಾದೆಣ್ಣೆಯೊಳು ಕೆಡ ಹೋರು ಕೋಲೆ ||

(ಮೋಹನದಾಸರ ಕೋಲು ಪದ)

## 9. ಅನುಪಲಬ್ಧ್ಯಧಿಕರಣ

**ಸೂತ್ರಗಳು :-**

1. ಓಂ ನ ಭಾವಃ, ಅನುಪಲಬ್ಧೇಃ ಓಂ || ೩೦ ||

2. ಓಂ ಕ್ಷಣಿಕತ್ವಾಚ್ಚ ಓಂ || ೩೧ ||

3. ಓಂ ಸರ್ವಥಾ ನುಪಪತ್ತೇಃ ಓಂ || ೩೨ ||

ವೈಭಾಷಿಕ, ಸೌತ್ರಾಂತ್ರಿಕ, ಮಾಧ್ಯಮಿಕ ಈ ಮೂರು ಮತಗಳನ್ನು ನಿರಾಕರಿಸಿ ಈಗ ವಿಜ್ಞಾನರೂಪವಾದ ಜಗತ್ತು ಅತಿರಿಕ್ತವಲ್ಲ ಎಂದು ಹೇಳುವ ಯೋಗಾಚಾರರ ಮತವನ್ನು ನಿರಾಕರಿಸುತ್ತಾ "ನಯತೇತ್ವತ್ರಿಯತೇಯಚ್ಚ ಕಿಂಚಿತ್" ಎಂಬ ಶ್ರುತಿ "ಸ ಏವ ಭೂಯಃ" ಎಂಬ ಸ್ಮೃತಿ ಹಾಗೂ ಯುಕ್ತಿಗಳ ವಿರೋಧವಿರುವುದರಿಂದ ವೇದದ್ವೇಷಿಗಳ ಈ ಮತಗಳು ಅಪ್ರಯೋಜಕವಾದ ಹಾಗೂ ಅಶಾಸ್ತ್ರೀಯವಾದುವು ಎಂದು ಅಲ್ಲಗಳೆದರು.

**ದಾಸಸಾಹಿತ್ಯ:-**

1. ಎಲ್ಲಾ ಇಲ್ಲೇಂದವಗೆರಂದೂ ಇಲ್ಲ ಇಹಪರದಿ ನೋಡಾ

(ಶ್ರೀ ಶ್ರೀಧರವಿಠಲರು)

2. ವಾಸವಮುಖ ವಿಬುಧಾಸುರ ನಿಚಯಕೆ
ವಾಸುದೇವನೇ ಶುಭಾ ಶುಭದಾ
ಈ ಸಮಸ್ತ ಜಗದೀಶ ಕೇಶವಾ
ನೀಶ ಜೀವರೆಂಬೀ ಸುಜ್ಞಾನವೆ ॥
ಫಲವಿದು ಬಾಳ್ದುದಕೆ ॥

(ಶ್ರೀ ಜಗನ್ನಾಥದಾಸರು)

## 10. ನೈಕಸ್ಮಿನ್ನಧಿಕರಣ

**ಸೂತ್ರಗಳು :-**

**1. ಓಂ ನೈಕಸ್ಮಿನ್ನಸಂಭವಾತ್ ಓಂ || ೩೩ ||**

**2. ಓಂ ಏವಂ ಚ, ಆತ್ಮಾಕಾತ್ಸ್ನ್ಯರ್ಂವಮ್ ಓಂ || ೩೪ ||**

**3. ಓಂ ನ ಚ ಪರ್ಯಾಯಾದಪ್ಯವಿರೋಧಃ, ವಿಕಾರಾದಿಭ್ಯಃ ಓಂ || ೩೫ ||**

**4. ಓಂ ಅಂತ್ಯಾವಸ್ಥಿತೇಶ್ಚ, ಉಭಯನಿತ್ಯತ್ವಾತ್, ಅವಿಶೇಷಾತ್ ಓಂ || ೩೬ ||**

ಕಾಯ ಪರಿಮಾಣ ಉಳ್ಳ ಆತ್ಮನಿಂದಲೂ, ದೃಷ್ಟಾದೃಷ್ಟ ಸಾಧನೆಯಿಂದಲೂ ಸತ್ತು, ಅಸತ್ತು, ಸದಸತ್ತು ಇತ್ಯಾದಿ ಜಿನನಿಂದ ಹೇಳಲ್ಪಟ್ಟ ಜಗತ್ತಿಗೆ ಸಪ್ತಭಂಗಿತ್ವವು ಕೂಡುವುದಿಲ್ಲ, ಏಕೆಂದರೆ ಆಸಪ್ತಭಂಗಿತ್ವದಿಗಳೇ ಅಪ್ರಮಾಣಿಕವಾದದ್ದು ಆದ್ದರಿಂದ ವಿಷ್ಣುವಿಗೇನೇ ವಿಶ್ವಕರ್ತೃತ್ವವು ಸಿದ್ಧಿಸುವುದಾಗಿದೆ.

**ದಾಸಸಾಹಿತ್ಯ :-**

1. ಕುದುರೆಬಾಲದ ಕೊನೆಯ ಕೂದಲು
ತುದಿ ವಿಭಾಗವಮಾಡೇ ಶತವಿಧ-
ವದರೊಳೊಂದನು ನೂರು ಭಾಗವ ಮಾಡಲೆಂತಿಹುದೊ ॥
ವಿಧಿ ಭವಾದಿ ಸಮಸ್ತ ದಿವಿಜರ
ಮೊದಲುಮಾಡಿ ತೃಣಾಂತ ಜೀವರೊ-
ಳಧಿಕ ನ್ಯೂನತೆಯಿಲ್ಲವೆಂದಿಗು ಜೀವಪರಮಾಣು ॥

(ಶ್ರೀಹರಿಕಥಾಮೃತಸಾರ)

(ಇದರಂತೆ ಉಳಿದ ವಿಚಾರ)

## 11. ಪ್ರತ್ಯುಧಿಕರಣ

**ಸೂತ್ರಗಳು :-**

1. ಓಂ ಪತ್ಯುರಸಾಮಂಜಸ್ಯಾತ್ ಓಂ || ೩೭ ||
2. ಓಂ ಸಂಬಂಧಾನುಪಪತ್ತೇಶ್ಚ ಓಂ || ೩೮ ||
3. ಓಂ ಅಧಿಷ್ಠಾನುಪಪತ್ತೇಶ್ಚ ಓಂ || ೩೯ ||
4. ಓಂ ಕರಣವಚ್ಚೇನ್ನ, ಭೋಗಾದಿಭ್ಯಃ ಓಂ || ೪೦ ||
5. ಓಂ ಅಂತವತ್ತ್ವಮಸರ್ವಜ್ಞತಾ ವಾ ಓಂ || ೪೧ ||

ಪಶುಪತಿಯಾದ ರುದ್ರನೇ ಜಗತ್ಕರ್ತ ಎನ್ನುವ ಮತವನ್ನು ನಿರಾಕರಿಸಿದರು. ಪಾರತಂತ್ರ್ಯ ಹಾಗೂ ಜನನ ದೋಷ ರುದ್ರನಿಗಿದ್ದ ಕಾರಣ. ಅಂಭ್ರಣಿ ಸೂತ್ರದ "ಅಹಂ ರುದ್ರಾಯಧನುರಾತನೋಮಿ"....ಇತ್ಯಾದಿಗಳಿಂದಲೂ ಪ್ರಳಯದಲ್ಲಿದ್ದವನು ನಾರಾಯಣ ಒಬ್ಬನೇ ಎನ್ನುವ ಶ್ರುತಿಯಿಂದಲೂ ಉದಾಹರಿಸಿದರು. ಸಾಲದುದಕ್ಕೆ ರುದ್ರನಿಗೆ ಶರೀರವೇ ಇಲ್ಲದಿರುವುದರಿಂದ ವಿಷ್ಣುವಿನಂತೆ ಜಗತ್ಕರ್ತೃತ್ವವು ಶಿವನಲ್ಲಿ ಕೂಡುವುದಿಲ್ಲ.

**ದಾಸಸಾಹಿತ್ಯ :-**

ದೇವ ಇಂದ್ರಗಧಿಕ ಮಹರುದ್ರದೇವರಿಗೆ ಸಮ ಗರುಡನು.
ಕೇವಲ ಶೇಷ, ರುದ್ರ, ಗರುಡಗೆ, ದೇವಿಹೆಚ್ಚು ಸರಸ್ವತಿ ।
ವಾಯುವಿಗೆ ಸಮರಿಲ್ಲ ಜಗದೊಳು । ವಾಯುದೇವರೇ ಬ್ರಹ್ಮರು
ವಾಯು ಬ್ರಹ್ಮನಿಗೆ ಕೋಟಿಗುಣಗಳಿಂದಧಿಕ ಶಕ್ತಳು ಶ್ರೀರಮಾ.
ಅನಂತಾನಂತ ಗುಣಗಳಿಂದಧಿಕ ಲಕುಮಿಗೆ ಆದಿ ಪುರಂದರವಿಠಲ
ಘನರುಸಮರಿಲ್ಲ ಜಗದೊಳು ಹನುಮ ಹೃದ್ಪದ್ಮವಾಸಿಗೆ,
ಸತ್ಯ ಜಗಕಿದು ಪಂಚಭೇದವು ನಿತ್ಯ ಶ್ರೀ ಗೋವಿಂದನ
ಕೃತ್ಯ ತಿಳಿದು ತಾರತಮ್ಯದಿ ಕೃಷ್ಣನೇ ಅಧಿಕೆಂದು ಸಾರಿರೈ.

**(ಶ್ರೀ ಪುರಂದರದಾಸರು)**

ವಾಮದೇವ, ವಿರಂಚಿತನಯ ಉ-। ಮಾ ಮನೋಹರ ಉಗ್ರಧೂ ಜಟಿ.
ಸಾಮಜಾಜಿನವಸನ ಭೂಷಣ ಸುಮನಸೋತ್ತಂಸ ॥

**[ಹರಿಕಥಾಮೃತಸಾರ]**

## 12. ಉತ್ಪತ್ತ್ಯಧಿಕರಣ

**ಸೂತ್ರಗಳು :-**

1. ಓಂ ಉತ್ಪತ್ತ್ಯ ಸಂಭವಾತ್ ಓಂ || ೪೨ ||

2. ಓಂ ನ ಚ ಕರ್ತುಃ ಕರಣಮ್ ಓಂ || ೪೩ ||

3. ಓಂ ವಿಜ್ಞಾನಾದಿಭಾವೇ ವಾ ತದಪ್ರತಿಷೇಧಃ ಓಂ || ೪೪ ||

4. ಓಂ ವಿಪ್ರತಿಷೇಧಾಚ್ಚ ಓಂ || ೪೫ ||

ಅಪಾರ ಶಕ್ತನಾದ ವಿಷ್ಣು ಒಬ್ಬನಿಗೇ ಈ ಜಗತ್ಕರ್ತೃತ್ವ ಕೂಡುವುದೇ ಹೊರತು ರುದ್ರಾದಿ ಇತರ ದೇವತೆಗಳಿಗಲ್ಲ. ಸ್ತ್ರೀ ಅಥವ ಪ್ರಕೃತಿ ಇಲ್ಲಿ ಸೃಷ್ಟಿಸಬಲ್ಲವನು ವಿಷ್ಣುಮಾತ್ರ. ಆದ್ದರಿಂದ ಕೇವಲಶಕ್ತಿಯಿಂದ ಜಗತ್ತಿನ ಉತ್ಪತ್ತಿಯನ್ನು ಹೇಳುವ ಮತವನ್ನು ನಿರಾಕರಿಸಿ. ಅದು ವಿಷ್ಣುವಿಗೆ ಸಾಧ್ಯ ಎಂದರು.

**ದಾಸಸಾಹಿತ್ಯ :-**

ಒಲ್ಲಿದೆ ಏಕಮ್ಮ ಲಕುಮಿ ವಾಸುದೇವಗೆ || ಪ ||
ಆವನ ವಾರ್ತೆ ಕೇಳಿದವರು ಒಲ್ಲರೇ ಸಂಸಾರವನ್ನು
ಅವನ ಮೂರ್ತಿ ನೋಡಿದವರು ಮನೆಯ ಧನವ ಬಿಡುವರು
ಅವನ ಪುರಕೆ ಪೋದಜನರು ಒಮ್ಮೆಗನ್ನ ಹಿಂತಿರುಗರು
ಅವರು ತಾನೇ ತನಯರನ್ನು ತನ್ನವಯವದಿಂದಲೇ ಪಡೆದವಗೆ || ೪ ||

ಸ್ವರತ್ವಾನಪೇಕ್ಷಾ ಕಾಮಿನದ್ರಾಹೀನ, ಅವಶಸೇಯು
ಸ್ವರುಶರೂಪ ವಾಚ್ಯಶಬ್ದ ಅಮಿಕಭೋಕ್ತನು
ಗುರುಗೋಪಾವಿಠಲನು ನಿರುತ ತನ್ನ ವಕ್ಷದೊಳು
ಅರಮನೆಯ ಮಾಡಿಕೊಟ್ಟು ಮರುಳು ಮಾಡಿದ ಮಾಯಾವಿಗೆ || ೫ ||

**[ಶ್ರೀ ಗುರುಗೋಪಾಲವಿಠಲರು]**

-0-0-0-0-

## ದ್ವಿತೀಯಾಧ್ಯಾಯ ತೃತೀಯ ಪಾದ

### 1. ವಿಯದಧಿಕರಣ

**ಸೂತ್ರಗಳು :-**

1. ಓಂ ನ ವಿಯತ್, ದಶ್ರುತೇಃ ಓಂ || ೧ ||

2. ಓಂ ಅಸ್ತಿ ತು ಓಂ || ೨ ||

3. ಓಂ ಗೌಣಸಂಭವಾತ್ ಓಂ || ೩ ||

4. ಓಂ ಶಬ್ದಾಚ್ಚ ಓಂ || ೪ ||

5. ಓಂ ಸ್ಯಾಚ್ಚೈಕಸ್ಯ, ಬ್ರಹ್ಮ ಶಬ್ದವತ್ ಓಂ || ೫ ||

6. ಓಂ ಪ್ರತಿಜ್ಞಾಹಾನಿರವ್ಯತಿರೇಕಾತ್, ಶಬ್ದೇಭ್ಯಃ ಓಂ || ೬ ||

7. ಓಂ ಯಾವದ್ವಿಕಾರಂ ವಿಭಾಗ:, ಲೋಕವತ್ ಓಂ || ೭ ||

ಆಕಾಶವು ಉತ್ಪತ್ತಿವುಳ್ಳದ್ದೇ ಇಲ್ಲವೇ ಎಂಬ ಶಂಕೆ ಬಂದರೆ ಅನುತ್ಪತ್ತಿಗೆ ಶ್ರುತಿ-ಇಲ್ಲದ ಕಾರಣ ಆಕಾಶವು ಉತ್ಪತ್ತಿವುಳ್ಳದ್ದೇ. ಆಕಾಶ ಉತ್ಪತ್ತಿವಿಷಯದಲ್ಲಿ ಶ್ರುತಿ ಇದೆ. ಆದರೆ ಗೌಣವಾಗಿರಬಹುದು. ಯಾವುದು ಹುಟ್ಟುವುದೋ ಅದಕ್ಕೆ ನಾಶವುಂಟೆಂಬುದು ಸಿದ್ಧವಿಷಯ. ಪರಮಾತ್ಮನೊಬ್ಬನೇ ಏಕಮೇವ ಅದ್ವಿತೀಯ ಬಹ್ಮಾದಿ ಇತರರಲ್ಲ.

**ದಾಸಸಾಹಿತ್ಯ :-**

ಭೂಸಲಿಲಶಿಖಿಪವನಭೂತಾ-
ಕಾಶದೊಳಗೈದೈದು ತನ್ಮಾ-
ತ್ರಾಸಹಿತ ಒಂದಧಿಕ ಪಂಚಾಶದ್ವರಣವೇದ್ಯ ।
ಈ ಶರೀರದಲ್ಲಿ ವ್ಯಾಪಿಸಿದ್ದು ಸು-
ರಾಸುರರಿಗೆ ನಿರಂತರದಲಿ ಸು-
ಖಾಸುಖಪ್ರದನಾಗಿ ಆಡುವ ದ್ವೇಷಿಪರ ಬಡಿವ ॥

(ಹರಿಕಥಾಮೃತಸಾರ)

## 2. ಮಾತರಿಶ್ವಾಧಿಕರಣ

1. ಓಂ ಏತೇನ ಮಾತರಿಶ್ವಾ ವ್ಯಾಖ್ಯಾತಃ ಓಂ || ೮ ||

"ಪ್ರಾಣಾಧ್ವಾಯುರಜಾಯತ" ಇತ್ಯಾದಿ ಶ್ರುತಿಗಳು ವಾಯುದೇವರಿಗೆ ಉತ್ಪ-ತ್ತಿ ಹೇಳಿರುವುದರಿಂದ ಸರ್ವೋತ್ತಮನಾದ ಪರಮಾತ್ಮನೊಬ್ಬನಿಗೇನೇ ಉತ್ಪತ್ತಿ ಇಲ್ಲ ಎಂಬುದು ನಿಶ್ಚಿತವು.

**ದಾಸಸಾಹಿತ್ಯ :-**

ಏಕವಿಂಶತಿ ಮತ ಪ್ರವರ್ತಕ
ಕಾಕುಮಾಯ್ಗಳ ಕುಹುಕಯುಕ್ತಿ ನಿ-
ರಾಕರಿಸಿ ಸರ್ವೋತ್ತಮನು ಹರಿಯೆಂದು ಸ್ಥಾಪಿಸಿದ ।
ಶ್ರೀಕಳತ್ರನ ಸದನ ದ್ವಿಜಪ ಪಿ-
ನಾಕಿ ಸನ್ನುತಮಹಿಮ ಪರಮಕೃ-
ಪಾಕಟಾಕ್ಷದಿ ನೋಡು ಮಧ್ವಚಾರ್ಯ ಗುರುವರ್ಯ ॥

(ಶ್ರೀ ಹರಿಕಥಾಮೃತಸಾರ)

2. “ಹನುಮಂತನುದಿಸಿದನು ಭೂತಳದಿ ಹನುಮಂತನುದಿಸಿದನು.

(ಹನುಮದ್ವಿಲಾಸ

### 3. ಅಸಂಭವಾಧಿಕರಣ

ಸೂತ್ರ :-

1. ಅಸಂಭವಸ್ತು, ಸತೋ ಸುಪಪತ್ತೇಃ ಓಂ ||೯||

“ಅಜಾಯಮಾನೋ ಬಹುದಾ ವಿಜಾಯತೇ” (ತೈ.ಅ.2.13) ಎಂಬ ಶ್ರುತಿ ಯಂತೆ ಹರಿಗೆ ಜನನವಿಲ್ಲ ಹಾಗೂ ಯಾವವಿಕಾರವಿಲ್ಲ ಆದರೆ ಪ್ರಾದುರ್ಭಾವರೂಪ ವಾದ ಜನಿಯನ್ನು ಹೇಳಿದ್ದರಿಂದ ಅವನ ಸರ್ವೋತ್ತಮತ್ವಕ್ಕೆ ಚ್ಯುತಿ ಇಲ್ಲ, ಪರಾಧಿನಾದಿ ಇಲ್ಲ.

ಪರದೇಶಿ ನೀನು ಸ್ವದೇಶಿ ನಾನು ॥ ಪ ।
ಪರಮಭಾಗವತರ ಬಾ ಹೋಗಿ ಕೇಳೋಣ ॥ ಅ ।
ಎನಗೆ ಜನಕನು ನೀನು ನಿನಗಾವ ಜನಕನೊ
ಜನನಿ ಇಂದಿರಾ ದೇವಿ ನಿನಗಾವಳೋ
ವನಜ ಪೀಠನು ಭ್ರಾತ ನಿನಗಾವ ಭ್ರಾತನೋ
ಇನಸೋಮ ಮಾತುಳರು ನಿನಗಾವ ಮಾತುಳನೊ । ॥ ೧ ।

ಸರನದೀ ಅಗ್ರಜಳು ನಿನಗೆ ಅಗ್ರಜಳಾರು
ಶರನಿಧಿ ಭಾವ ನಿನಗಾರೊ ಭಾವ
ಸ್ಮರನು ಕಿರಿ ಸಹಭವನು ನಿನಗೆ ಸಹಭವರ್‍ಯಾರೊ
ಸುರರು ಬಂಧುಗಳೆನಗೆ ನಿನಗಾರು ಬಂಧವರೊ ॥ ೨ ।

ವರ ತಿಳಾಸಾಮಾತೆ ನಿನಗೆ ಸಾಮಾತೆಯರೋ
ಮರುತ ದೇವರು ಗುರುವು ನಿನಗಾರು ಗುರುವೋ
ಸಿರಿಯರಸ ವಿಜಯವಿಠಲರೇಯನೆ ನಿನ್ನ
ಚರಣ ಸೇವಕ ನಾನು ನೀವಾರ ಸೇವಕನೊ ॥ ೩ ।

(ಶ್ರೀ ವಿಜಯದಾಸರು)

### 4. ತೇಜೋಧಿಕರಣ

ಸೂತ್ರ :- ಓಂ ತೇಜೋ ತಸ್ತಥಾ ಹ್ಯಾಹ ಓಂ || ೧೦ ||

“ವಾಯೋರಗ್ನಿಃ” (ತೈ. ೨. ೧.) ಇತ್ಯಾದಿ ಶ್ರುತ್ಯಾನುಸಾರ ತೇಜಸ್ಸು ವಾಯುವಿನಿಂದಹುಟ್ಟುತ್ತದೆ ಅಂದರೆ ವಾಯುದೇವರ ದ್ವಾರಾ ಎಂದರಿಯಬೇಕು.

"ತತ್ತೇಜೋ ಸೃಜತ" ಎನ್ನುವ ಶ್ರುತಿಯಿಂದ ಶ್ರೀ ಹರಿಯೇ ತೇಜಸ್ಸಿನ ಉತ್ಪತ್ತಿಗೆ ಮುಖ್ಯ ಕಾರಣ ವಾಯುವಲ್ಲ.

**ದಾಸಸಾಹಿತ್ಯ :–**

1. ಜ್ಯೋತಿಯೊಗಿಪ್ಪನು ಕಪಿಲ ಪುರ-
ಹೂತ ಮುಖದಿಕ್ಪತಿಗಳಿಂದ ಸ-
ಮೇತಿನಾಗಿಹ ದಕ್ಷಿಣಾಕ್ಷಿಯ ಮುಖದೊಳಿಹ ವಿಶ್ವ ॥
ಶ್ವೇತವರ್ಣ ಚತುರ್ಭುಜನು ಸಂ-
ಪ್ರೀತಿಯಿಂದಲಿ ಸ್ಥೂಲವಿಷಯವ
ಚೇತನರಿಗುಂಡುಣಿಪ ಜಾಗ್ರತೆಯಿತ್ತು ನೃಗಜಾಸ್ಯ ॥

(ಹರಿಕಥಾಮೃತಸಾರ)

ಬಂದಾ ಮನ್ಮಾಸಕೆ ಶ್ರೀಹರಿ ॥ ಪ ॥
ಬಲು ತೇಜಸ್ಸಿಗೆ ತೇಜಸ್ಸಾದ ಪ್ರಭು ॥

## 5. ಅಬಧಿಕರಣ

**ಸೂತ್ರ :–** ಓಂ ಆಪಃ ಓಂ ॥ ೧೧ ॥

"ಅಗ್ನೇರಾಪಃ" ಎನ್ನುವುದರಿಂದ ಜಲಕ್ಕೆ ಉಗಮ ತೇಜಸ್ಸು ಅಂದರೆ ಹಾಗಲ್ಲ "ಸ ಇದಂ ಸರ್ವಮಸೃಜತ-ಕರ್ತಾ ಸರ್ವಸ್ಯ ವೈ ವಿಷ್ಣು:" ಇತ್ಯಾದಿ ಶ್ರುತಿಗಳಂತೆ ಶ್ರೀಹರಿಯೇ ಎಲ್ಲದಕ್ಕೂ ಮೂಲಕಾರಣ. ತೇಜಸ್ಸು ಇತ್ಯಾದಿ ದ್ವಾರಮಾತ್ರ.

**ದಾಸಸಾಹಿತ್ಯ :–**

ಅನಲನೊಳು ಹೋಮಿಸುವ ಹರಿಚಂ
ದನವೆ ಮೊದಲಾದುದರ ಸೂವಾ
ಸನೆಯು ಪತ್ ಪ್ರತ್ಯೇಕ ತೋರ್ಪುದು ಎಲ್ಲ ಕಾಲದಲಿ ॥
ದನುಜಮಾನವದಿವಿಜರವರವ-
ರಸುಚಿತೋಚಿತ ಕರ್ಮ ವೃಜಿನಾ
ರ್ದನನು ವ್ಯಕ್ತವ ಮಾಳ್ಪ ತ್ರಿಗುಣಾ ತೀತ ವಿಖ್ಯಾತ ॥

(ಹರಿಕಥಾಮೃತಸಾರ)

## 6. ಪೃಥಿವ್ಯಧಿಕರಣ

**ಸೂತ್ರ :–** ಓಂ ಪೃಥಿವೀ, ಅಧಿಕಾರರೂಪ ಶಬ್ದಾಂತರಾದಿಭ್ಯಃ ಓಂ ॥ ೧೨ ॥

ಶ್ರೀಹರಿಗೆ ಅನ್ನಸೃಷ್ಟಿಯಲ್ಲಿ ದ್ವಾರವೋ, ಪೃಥವೀಸೃಷ್ಟಿಯಲ್ಲೋ ಎಂಬು ಸಂದೇಹ ಪಟ್ಟರೆ ಎರಡೂ ನಿರವಕಾಶಗಳಾಗಿರುವುದರಿಂದ ಆಯಾಯ ದ್ವಾರಗಳ ಮೂಲಕ ಅನಾದಿಯಾದ, ಸರ್ವೇಶ್ವರನಾದ ಶ್ರೀಹರಿ ಹಿರಣ್ಯಾತ್ಮಕ ವೀರ್ಯವುಳ್ಳವ-ನಾದ್ದರಿಂದ ಕಾರ್ಯ ಮಾಡುವನು.

**ದಾಸಸಾಹಿತ್ಯ:-**

ಅನ್ನವಿಲ್ಲಾ ಎಂದು ಅನ್ಯರನು ಕಾಡಿ ಬೇಡದಲೆ
ಅನ್ನಮಯನಾದ ಅನಿರುದ್ಧನ್ನ ಪ್ರಸನ್ನೀಕರಿಸು ಅನುಗಾಲ ॥

**(ತತ್ವಸುವ್ವಾಲಿ - ಶ್ರೀ ಜಗನ್ನಾಥದಾಸರು)**

## 7. ತದಪೀಥಾಧಿಕರಣ

**ಸೂತ್ರ :-** **ಓಂ ತದಭಿಧ್ಯಾನದೇವ ತು ತಲ್ಲಿಂಗಾತ್ಸಃ ಓಂ ॥ ೧೩ ॥**

ಸಂಹಾರಕನು ವಿಷ್ಣುವೋ ಅಥವ ರುದ್ರನೋ ಎಂದರೆ ರುದ್ರನು ವಿಷ್ಣುವಿನ ಅಧೀನನಾದ ಕಾರಣ ಸಂಹಾರ ಕರ್ತನೂ ವಿಷ್ಣುವೇ.

**ದಾಸಸಾಹಿತ್ಯ :-**

ಸೃಷ್ಟಿ, ಸ್ಥಿತಿ, ಲಯ ಕಾರಣ ಗೋವಿಂದ
ಈಪರಿ ಮಹಿಮೆಯ ತಿಳಿಯೋದೇ ಆನಂದ
ಗೋವಿಂದ ನಿನ್ನಾನಂದ । ಸಾಧನ ಸಕಲವೆಲ್ಲಾ ನಿನ್ನಿಂದ ॥

**(ಶ್ರೀ ಪುರಂದರದಾಸರು)**

## 8. ವಿಪರ್ಯಯಾಧಿಕರಣ

**ಸೂತ್ರ :-**

**ಓಂ ವಿಪರ್ಯೇಣ ತು ಕ್ರಮಃ, ಅತ ಉಪಪದ್ಯತೇ ಚ ಓಂ ॥ ೧೪ ॥**

ಪದಾರ್ಥ ಎಲ್ಲಿ ಹುಟ್ಟುವುದೋ ಅಲ್ಲಿ ಲಯ. ಶ್ರೀಹರಿಗೆ ಉತ್ಪತ್ತಿ ಇಲ್ಲವಲ್ಲಾ ಎಂದರೆ ಪರಮಾತ್ಮನು ಬ್ರಹ್ಮನಿಂದ ಪೃಥ್ವಿವರೆಗೆ ಸೃಷ್ಟಿಸಿ ಪೃಥವಿಯಿಂದ ಬ್ರಹ್ಮನ-ವರೆಗೆ ಲಯ ಮಾಡುವನು. ಇದು ಅವನ ಲೀಲೆ, ಇದರಿಂದ ಅವನಿಗೇನೂ ಪ್ರಯೋ-ಜನವಿಲ್ಲ. ಆದರೆ ಜೀವಿಗಳ ಉದ್ಧಾರಾಪೇಕ್ಷೆ ಮಾತ್ರವಿದೆ, ಲಯಕರ್ತ ಹರನಿಗಲ್ಲ.

**ದಾಸಸಾಹಿತ್ಯ :-**

ಜಗವನೆಲ್ಲವ ನಿರ್ಮಿಸು ವನಾ-
ಲ್ಲೊಗ ಸೊಳಗೆ ತಾನಿದ್ದು ಸಲಹುವ

ಗಗನಕೇಶನೊಳಿದ್ದು ಸಂಹರಿಸುವನು ಲೋಕಗಳ ।
ಸ್ವಗತಭೇದವಿವರ್ಜಿಕನು ಸ-
ರ್ವಗ ಸದಾನಂದೈಕ ದೇಹನು
ಬಗೆ ಬಗೆಯ ನಾಮದಲಿ ಕರೆಸುವ ಭಕುತರನು ಪೊರೆವ ॥

## 9. ಅಂತರಾಧಿಕರಣ

**ಸೂತ್ರಗಳು :-**

**1. ಓಂ ಅಂತರಾ ವಿಜ್ಞಾನಮನಸೀ ಕ್ರಮೇಣ ತಲ್ಲಿಂಗಾದಿತಿ ಚೇನ್ನ, ಅವಿಶೇಷಾತ್ ಓಂ** ॥ ೧೫ ॥

**2. ಓಂ ಚರಾಚರವ್ಯಪಾಶ್ರ, ಯಸ್ತು ಸ್ಯಾತ್, ತದ್ವ್ಯಪದೇಶೋ ಭಾಕ್ತಃ, ತದ್ಭಾವಭಾವಿತ್ವಾತ್ ಓಂ** ॥ ೧೬ ॥

ಈ ಅಧಿಕರಣದಲ್ಲಿ ಆಧಿಭೂತಾದಿ ಲಯವಿಷಯ ಹೇಳುತ್ತಾ "ಸರ್ವಂವಾ ಏತಕ್ಕ್ರಮಾದುತ್ಪದ್ಯತೇ ವ್ಯುತ್ಕ್ರಮಾದ್ವಿಲೀಯತೇ" ಎಂದು ಸರ್ವಕ್ಕೂ ವ್ಯುತ್ಕ್ರಮದಿಂದಲೇ ಲಯ ಎಂದು ಶ್ರುತಿಗಳು ಸಾರುತ್ತಿವೆ ಎಂದರು.

**ದಾಸಸಾಹಿತ್ಯ :-**

1. ಪೃಥಿವಿಗೆ ಅಪ್ಪು ಅಪ್ಪಿಗೆ ತೇಜ । ತೇಜಸ್ಸಿಗೆ ವಾಯು ಮರುತ ಆಕಾಶ । ಆಕಾಶಕ್ಕೆ ಇಂದ್ರಿಯ ರೂಪವಾದ । ಮನಸ್ಸು ವೈಕಾರಿಕ ತೈಜಸ ದೇವತೆಗಳು । ಮನಸ್ಸು ತತ್ವದ ಲಯವು । ಮಹತತ್ವ ತ್ರಯೋದಶಭಾಗದಿ ಕೂಡಿಪ್ಪುದು । ದ್ವಾದಶ ರಜಸಿನೊಳು ದಶ ಸತ್ವದಲಿಪ್ಪುದು । ಒಂದು ರಜಸು ರಜಸ್ಸಿನಲ್ಲಿ । ಒಂದು ರಾಜಸತಾಮಸದಲ್ಲಿ । ತಾಮಸ ಒಂದು ಕೂಡಿಹುದು । ಮೂರು ಭಾಗವಕ್ಷಸ್ಥಳದಲ್ಲಿಪ್ಪುದು । ಶ್ಯಾಮಲವಂತೆ ಸ್ಥಳಬಿಟ್ಟು ಮಹತತ್ವದಿ ಕೂಡಿಹುದು । ವಿಷಮವಸ್ಥೆ ಸೃಷ್ಟಿಯರಚಿಸುವ ಗುರುಪುರಂದರವಿಠಲಾ ॥

2. ಉತ್ತಮರಲ್ಲಿ ನೀಚರ ಲಯ..........

**(ಶ್ರೀ ಗುರುಪುರಂದರವಿಠಲ ಕೃತ ಲಯ ಸುಳಾದಿ)**

## 10. ಆತ್ಮಾಧಿಕರಣ

**ಸೂತ್ರಗಳು :-**

**1. ಓಂ ನಾತ್ಮಾ, ಅಶ್ರುತೇಃ, ನಿತ್ಯತ್ವಾಚ್ಚ ತಾಭ್ಯಃ ಓಂ** ॥ ೧೭ ॥

"ನಿತ್ಯೋನಿತ್ಯಾನಾಂ" ಇತ್ಯಾದಿ ಶ್ರುತಿಗಳಂತೆ ಪರಮಾತ್ಮನಿಗೆ ಎಂದಿಗೂ ಲಯವಿಲ್ಲ. ಉಳಿದ ಬ್ರಹ್ಮಾದಿಗಳಿಗೆ ಲಯಹೇಳಿದೆ. (ಲಕ್ಷ್ಮೀದೇವಿ ನಿತ್ಯಮುಕ್ತಳು ಲಯವಿಲ್ಲ ಅವಳಿಗೆ.)

**ದಾಸಸಾಹಿತ್ಯ :-**

ನಿನಗೆ ನೀನೇ ಕಾರಣನಾಗಿಹಾ ಅಕಾರಣರು ಬ್ರಹ್ಮಾದಿಗಳು । ನೀನೇ ಕರ್ತನು ಅಕರ್ತರು ಸಿರಿ ಅಜಭವಾದಿಗಳು । ಸ್ವತಂತ್ರ ನೀನು ಅಸ್ವತಂತ್ರರು ಅವರು । ಮೂಲ ನೀನು ಮಧ್ಯಮರು ಅವರು। ನಿತ್ಯ ನೀನು ಲಯವಾಗುವವರು । ಭೋಕ್ತ ನೀನೆ ಸರ್ವ ಸಾರಾತ್ಮಕನಾಗಿ ಹಾ ಸ್ವೀಕರಿಸುವಿ । ಕರ್ಮನಿನ್ನಾಧೀನ । ಅನಾದಿ ಕಾಲದ ಇರವನು ನೋಡಿ ಆವಜೀವರಿಗೆ ಸುಖಗಳನೀವೆ । ದುಃಖಗಳನೀವೆ । ಜೀವರಿಗೆ ದು: ಸಮ್ಮೋಹವ ತಂದು ಕವಿಸುವಿ । ಅನಾದಿ ಕರ್ಮ ಅನಾದಿ ಸಾಧನಂಗಳು । ಸ್ವ-ಸ್ವರೂಪ ತಿಳಿದು ಮಾಡಿಸಿ ಪರಿ ಪರಿ ಫಲಂಗಳನೀವೆ ಪುರಂದರವಿಠಲಾ ॥

**(ಶ್ರೀ ಪುರಂದರದಾಸರು)**

## 11. ಜ್ಞಾನಾಧಿಕರಣ

**ಸೂತ್ರಗಳು :-**

1. ಓಂಜ್ಞೋಽತ ಏವ ಓಂ ॥ ೧೮ ॥
2. ಓಂ ಯುಕ್ತೇಶ್ಚ ಓಂ ॥ ೧೯ ॥

"ನಿತ್ಯೋಽನಿತ್ಯಾನಾಂ" ಎಂದು ಜೀವನು ನಿತ್ಯನಾದರೂ, "ತೇವಾಏತೇ ಚಿದಾ-ತ್ಮಾನಃ" ಎಂಬ ಶ್ರುತಿಯಂತೆ ಜೀವನಿಗೆ ಆಧಾರವಾದ ಉಪಾದಿಯಾದ ಶರೀರಕ್ಕೆ ಉತ್ಪತ್ತಿ ಹೇಳುವುದರಿಂದ, ಪರಾಧೀನನಾದ ಜೀವ ಹುಟ್ಟುತ್ತಾನೆ ಎಂಬ ವ್ಯವಹಾರ-ವಿದೆ. ಜೀವನಿಗೆ ದೇಹ ಸಂಬಂಧ ಇರುವ ಕಾರಣ.

**ದಾಸಸಾಹಿತ್ಯ :-**

1. ಪುಟ್ಟಿಸಲಿ ಬೇಡ ಕೃಷ್ಣ । ಪುಟ್ಟಿಸಿದಕೆ ಸಲಹೊ ಎನ್ನ
   ಇಷ್ಟುಮಾತ್ರ ಬೇಡಿಕೊಂಬೆ । ಶ್ರೀ ಕೃಷ್ಣನೆ

**(ಶ್ರೀ ಕನಕದಾಸರು)**

2. ಪುಟ್ಟಿದಾಭುವಿಯಲ್ಲಿ ಬಹುಕಾಲಕಳೆಯಿತೋ
   ಇನ್ನು ಪುಟ್ಟದಂದದಿ ಮಾಡೊ । ಸರ್ವೇಶ ಕೃಷ್ಣ ॥

**(ಶ್ರೀ ವ್ಯಾಸರಾಯರು)**

## 12. ಉತ್ಕ್ರಾಂತ್ಯಧಿಕರಣ

**ಸೂತ್ರಗಳು :-**

1. ಓಂ ಉತ್ಕ್ರಾಂತಿಗತ್ಯಾಗತೀನಾಮ್ ಓಂ ॥ ೨೦ ॥
2. ಓಂ ಸ್ವಾತ್ಮನಾ ಚೋತ್ತರಯೋಃ ಓಂ ॥ ೨೧ ॥

3. ಓಂ ನಾಣುರತಚ್ಛ್ರುತೇರಿತಿ ಚೇನ್ನ,
ಇತರಾಧಿಕಾರಾತ್ ಓಂ || ೨೨ ||

4. ಓಂ ಸ್ವಶಬ್ದೋನ್ಮಾನಾಭ್ಯಾಂ ಚ ಓಂ || ೨೩ ||

5. ಓಂ ಅವಿರೋಧಃ, ಚಂದನವತ್ ಓಂ || ೨೪ ||

6. ಓಂ ಅವಸ್ಥಿತಿವೈಶೇಷ್ಯಾದಿತಿ ಚೇನ್ನ,
ಅಭ್ಯುಪಗಮಾದ್ಧೃದಿ ಹಿ ಓಂ || ೨೫ ||

7. ಓಂಗುಣಾದ್ವಾ, ಆಲೋಕವತ್ ಓಂ || ೨೬ ||

ಜೀವನು ಅಣುವಾದಾಗ್ಯೂ ಹರಿಚಂದನ ಬಿಂದುವಂತೆ ಶರೀರದ ಎಲ್ಲಾ ಅವ-ಯವದಲ್ಲಿಯೂ ಭಗವದನುಗ್ರಹದಿಂದ ವ್ಯಾಪಿಸಿರುತ್ತಾನೆ. ಅಂದರೆ ಶರೀರದ ಎಲ್ಲಾ ಅವಯವಗಳ ಸಂಬಂಧವನ್ನು ಅಣುವಾದ ಜೀವನು ಭಗವದನುಗ್ರಹ ವಿಶೇಷದಿಂದ ಹೊಂದಿರುತ್ತಾನೆ. ಅಂತೆಯೇ ಅನೇಕ ದೇಹಗಳ ಪ್ರವೇಶಾದಿಗಳೂ (ಮಾತೃಪಿತೃ-ಗಳ ಮೂಲಕ) ನಡೆಯುತ್ತಿವೆ.

ದಾಸಸಾಹಿತ್ಯ :-

ಏಕೆ ಬಂದೀ ಜೀವ, ಏಕೆ ಬಂದಿ || ಪ ||
ಮೇರು ಪರ್ವತದಲ್ಲಿ ಪಾರಣಾವಂತನಾಗಿ
ರಮಾರಮಣನ ಪಾದ ಸೇವ ಬಿಟ್ಟು ಸೀ || ೧ ||
ಉಣು, ಉಣು, ಉಣು ಮತ್ತೆ ಮೇಲುಂಣ್ಣು
ಹೆಣ್ಣು, ಹೊನ್ನು ಮಣ್ಣು ಸನದೆಂತು ನಂಬಿ || ೨ ||
ಆದದ್ದೆಲ್ಲಾ ಆಯಿತು, ಹೋದ ಮಾತುಗಳ್ಯಾಕೆ
ಇನ್ನಾದರೂ ಶ್ರೀದ ವಿಜಯವಿಠಲನ ಆರಾಧಿಸು ಜೀವ || ೩ ||

(ಶ್ರೀ ವಿಜಯದಾಸರು)

## 13. ವ್ಯತಿರೇಕಾಧಿಕರಣ

ಸೂತ್ರ :-

1. ಓಂ ವ್ಯತಿರೇಕೋ ಗಂಧವತ್, ತಥಾ ಹಿ ದರ್ಶಯತಿ ಓಂ ||೨೭||

ಅಣುವಾದ ಜೀವನಿಗೆ, ಅಚಿಂತ್ಯ ಶಕ್ತಿಯುಳ್ಳ ಪರಮಾತ್ಮನ ಪ್ರಸಾದ ಲಬ್ಧ ಸಾಮರ್ಥ್ಯದಿಂದ ಬಹುರೂಪವುಳ್ಳವನಾಗುವನು.

ದಾಸಸಾಹಿತ್ಯ :-

ಗುರು ಮುಖ್ಯವಿರಬೇಕು ಹರಿಧ್ಯಾನವಿರಬೇಕು
ಪರ ಉಪಕಾರ ಇರಬೇಕು ಪ್ರತಿಕ್ಷಣ

ಪರರು ತನ್ನವರು ಸಮರೆಂದು ತಿಳಿಯಬೇಕು
ಹಿರಿದು ಹಿಗ್ಗದೆ ತಾನು ಅಸ್ವತಂತ್ರ ಎನಬೇಕು
ಪರಮಾಣು ಸ್ಥಳದಲ್ಲಿ ಹರಿವ್ಯಾಪ್ತನೆನಬೇಕು
ಈಪರಿ ತಿಳಿದರೆ ಅವನೆ ಮುಕ್ತಿಯೋಗ್ಯ
ಸಿರಿರಮಣ ನಮ್ಮ ಗೋಪಾಲವಿಠಲನ್ನ
ಕರುಣಕ್ಕೆ ಪಾತ್ರನಾದವನೆ ಇದರಿವ ॥ ೧ ॥

ಆವಾದ ಕರ್ಮಗಳ ದೇವಗರ್ಪಿತವಾಗೆ
ಜೀವರೆ ಧನ್ಯರೊ ಗೋಪಾಲವಿಠಲ ॥ ೨ ॥

**(ಶ್ರೀ ಗೋಪಾಲದಾಸರು)**

## 14. ಪೃಥಗಧಿಕರಣ

**ಸೂತ್ರಗಳು :-**

**1. ಓಂ ಪೃಥಗುಪದೇಶಾತ್ ಓಂ ॥ ೨೮ ॥**

**2. ಓಂ ತದ್ಗುಣಸಾರತ್ವಾತ್ತು ತದ್ವ್ಯಪದೇಶಃ, ಪ್ರಾಜ್ಞವತ್ ಓಂ ॥ ೨೯ ॥**

ಜೀವರು ಪರಮಾತ್ಮನಿಂದ ಅತ್ಯಂತ ಭಿನ್ನರು. "ತತ್ವಮಸಿ" ಇತ್ಯಾದಿ ಶ್ರುತಿ-ಬ್ರಹ್ಮ ಸದೃಶತ್ವವನ್ನು ತಿಳಿಸುವುದೇ ವಿನಹ "ದ್ವಾಸುಪರ್ಣಾದಿ" ಶ್ರುತಿಗಳಂತೆ ಜೀವರು ಪರಮಾತ್ಮನಿಂದ ಅತ್ಯಂತ ಭಿನ್ನರು ಹಾಗೂ ಅವನ ದಾಸರುಗಳು.

**ದಾಸಸಾಹಿತ್ಯ :-**

1. ಇಂದಿರಾಪತಿ ನೀನು । ಮಂದ ಭಾಗ್ಯನು ನಾನು
ವಂದ್ಯನೋ ನೀನು ಸುರರಿಂದ । ನರರಿಂದ ನಿಂದ್ಯನೋ ನಾನು ಎಂದೆಂದು ॥

**(ತತ್ವಸುವ್ವಾಲಿ - ಶ್ರೀ ಜಗನ್ನಾಥದಾಸರು)**

2. ನಾನು ನೀನು ಎನ್ನದಿರು ಹೀನ ಮಾನವ ॥ ಪ ॥
ಜ್ಞಾನದಿಂದ ನಿನ್ನ ನೀನೇ ತಿಳಿದು ನೋಡೆಲೊ ॥ ಅ ॥

**(ಶ್ರೀ ಕನಕದಾಸರು)**

**3) ಶ್ರೀ ಪುರಂದರದಾಸರ ದ್ವಾಸುಪರ್ಣ ಶ್ರುತಿ ವಿಚಾರ ಹೇಳಿದ ಬುಡ ಬುಡ ಕೆ ಪದವನ್ನು ಜ್ಞಾಪಿಸಿಕೊಳ್ಳಲಾಗಿದೆ.**

## 15. ಯಾವದಧಿಕರಣ

**ಓಂ ಯಾವದಾತ್ಮಭಾವಿತ್ವಾಚ್ಚ ನ ದೋಷಃ, ತದ್ದರ್ಶನಾತ್ ಓಂ ॥ ೩೦ ॥**

ಜೀವನು ಪರಮಾತ್ಮನ ಪ್ರತಿಬಿಂಬ ಸ್ಥಾನದಲ್ಲಿರುವುದರಿಂದ ಕೇವಲ ಅ ಸ್ವಾತಂತ್ರ್ಯಿಯಾದರೂ ಅನಾದಿ ನಿತ್ಯನಾಗಿರುತ್ತಿದ್ದಾನೆ. ಅನಿತ್ಯತ್ವ ದೇಹಕ್ಕೆ ಮಾತ್ರ.

**ದಾಸಸಾಹಿತ್ಯ :–**

ನಿರ್ಯಸೂತನ ನಿರ್ವಿಕಾರ ಸು-
ಹೃತ್ತಮ ಪ್ರಣವಸ್ಥ ವರ್ಣೋ-
ತ್ಪತ್ತಿಕಾರಣ ವಾಙ್ಮನೋಮಯ ಸಾಮಗಾನರತ ।
ದತ್ತ ಕಪಿಲಹಯಾಸ್ಯರೂಪದಿ
ಪೃಥ್ ಪೃಥಗ್ಜೀವರೊಳಗಿದ್ದು ಪ್ರ-
ವರ್ತಿಸುವನವರವರ ಯೋಗ್ಯತೆ ಕರ್ಮವನು ಸರಿಸಿ ॥

(ಹರಿಕಥಾಮೃತಸಾರ)

## 1.6 ಪುಂಸ್ತ್ವಾಧಿಕರಣ

**ಸೂತ್ರಗಳು :-**

**1. ಓಂ ಪುಂಸ್ತ್ವಾದಿವತ್ತು, ಅಸ್ಯ ಸತೋ ಭಿ-**
**ವ್ಯಕ್ತಿಯೋಗಾತ್ ಓಂ ॥ ೩೧ ॥**

**2. ಓಂ ನಿತ್ಯೋಪಲಬ್ಧ್ಯನುಪಲಬ್ಧಿಪ್ರಸಂಗೋ ನ್ಯತರ-**
**ನಿಯಮೋ ವಾ ಅನ್ಯಥಾ ಓಂ ॥ ೩೨ ॥**

ಜೀವನು ಜ್ಞಾನಾದಿರೂಪನು ಬಾಲ್ಯಾವಸ್ಥೆಯಲ್ಲಿ ಅಭಿವ್ಯಕ್ತನಾಗದಿರುವ ಅಪತ್ಯೋತ್ಪಾದನ ಶಕ್ತಿ ತಾರುಣ್ಯದಲ್ಲಿ ಆಭಿವ್ಯಕ್ತವಾಗುವುದರಿಂದ ಜೀವನ ಇಚ್ಛಾ ಪ್ರಯತ್ನ ಹಾಗೂ ಭಗವದನುಗ್ರಹದಿಂದ ಫಲಪ್ರಾಪ್ತಿ.

**ದಾಸಸಾಹಿತ್ಯ :–**

1. ಜನರೊಳಗೆ ನೀನಿದ್ದು, ಜನುಮ ಜನುಮಗಳಲ್ಲಿ
ಗುಣ ಕಾಲಕ್ರಿಯ ಸ್ವಭಾವಂಗಳನುಸರಿಸಿ ಪುಣ್ಯಪಾಪವ
ಮಾಡಿಸಿ ಕಾಯ್ವ ಕರುಣಾಳು ನಿನ್ನ ಸಂಕಲ್ಪಾನುಸಾರ ಮಾಡೋ ॥

(ಶ್ರೀ ಜಗನ್ನಾಥದಾಸರು)

2. ಏನು ಮಾಡುವ ಪುಣ್ಯ ಪಾಪಗ
ಳಾನೆ ಮಾಡುವೆನೆಂಬುವಾಧಮ
ಹೀನಕರ್ಮಕೆ ಪಾತ್ರನಾ ಪುಣ್ಯಕ್ಕೆ ಹರಿಯೆಂಬ ॥
ಮಾನವನು ಮಧ್ಯಮನು ದ್ವಂದ್ವಕೆ
ಶ್ರೀನಿವಾಸನೆ ಕರ್ತನೆಂದು ಸ-
ದಾನುರಾಗದಿ ನೆನೆದು ಸುಖಿಸುವರೇ ನರೋತ್ತಮರು ॥

## 17. ಕರ್ತೃತ್ವಾಧಿಕರಣ

**ಸೂತ್ರಗಳು :-**

1. ಓಂ ಕರ್ತಾ ಶಾಸ್ತ್ರಾರ್ಥವತ್ತ್ವಾತ್ ಓಂ || ೩೩ ||
2. ಓಂ ವಿಹಾರೋಪದೇಶಾತ್ ಓಂ || ೩೪ ||
3. ಓಂ ಉಪಾದಾನಾತ್ ಓಂ || ೩೫ ||
4. ಓಂ ವ್ಯಪದೇಶಾಚ್ಚ ಕ್ರಿಯಾಯಾಂ, ನ ಚೇನ್ನಿರ್ದೇಶವಿಪರ್ಯಯಃ ಓಂ || ೩೬ ||
5. ಓಂ ಉಪಲಬ್ಧಿವದನಿಯಮಃ ಓಂ || ೩೭ ||
6. ಓಂ ಶಕ್ತಿವಿಪರ್ಯಯಾತ್ ಓಂ || ೩೮ ||
7. ಓಂ ಸಮಾಧ್ಯಭಾವಾಚ್ಚ ಓಂ || ೩೯ ||
8. ಓಂ ಯಥಾ ಚ ತಕ್ಷಾ, ಉಭಯಥಾ ಓಂ || ೪೦ ||
9. ಓಂ ಪರಾತ್ತು ತತ್, ಶ್ರುತೇಃ ಓಂ || ೪೧ ||
10. ಓಂ ಕೃತಪ್ರಯತ್ನಾಪೇಕ್ಷಸ್ತು ವಿಹಿತಪ್ರತಿಷೇಧಾ-ವೈಯರ್ಥ್ಯಾದಿಭ್ಯಃ ಓಂ || ೪೨ ||

"ನಾಸ್ಯಃಕರ್ತಾ ಹರಿಕರ್ತಾ" ಎನ್ನುವ ಶ್ರುತಿಯಂತೆ ಎಲ್ಲವೂ ಹರಿಯಿಂದಲೇ ಆದ್ದರಿಂದ ಜೀವನಿಗೆ ಪುಣ್ಯಪಾಪಾದಿಗಳು ಕೊಡುವುದಿಲ್ಲವೆಂದರೆ ಹಾಗಲ್ಲ ಜೀವನಿಗೆ "ಕರ್ತೃತ್ವಂ ಕರಣತ್ವಚ" ಎನ್ನುವ ಶ್ರುತಿಯಂತೆ ಜೀವನಿಗೆ ಪಾರತಂತ್ರ್ಯಸಿದ್ದಿಸುವು-ದರಿಂದ ಈಶಾಧೀನ ಚೇಷ್ಟಕತ್ವ ರೂಪವಾದ ಪಾರತಂತ್ರ್ಯಕರ್ತೃತ್ವವನ್ನು ಒಪ್ಪ-ಬೇಕು. ಆದ್ದರಿಂದ ಜೀವನೂ ಕರ್ತನೇ.

**ದಾಸಸಾಹಿತ್ಯ :-**

ಸತ್ಯ ವಿಕ್ರಮ ಪುಣ್ಯಪಾಪ ಸ-
ಮಸ್ತರಿಗೆ ಕೊಡಲೋಸುಗದಿ ನಾ-
ಲ್ವತ್ತು ಭಾಗವ ಮಾಡಿ ಲೇಶಾಂಶವನು ಜನಕೀವ ॥
ಅತ್ಯಲುಪ ಪರಮಾಣುವಿಗೆ ಸಾ-
ಮರ್ಥ್ಯವನು ತಾ ಕೊಟ್ಟು ಸ್ಥೂಲ ಪ-
ದಾರ್ಥಗಳನುಂಡುಣಿಪ ಸರ್ವದ ಸರ್ವ ಜೀವರಿಗೆ ॥

ಇನಿತು ವಿಷ್ಣುರಹಸ್ಯದೊಳು ಭೃಗು
ಮುನಿಪನಿಂದ್ರದ್ಯುಮ್ನಗರುಪಿದು
ದನು ಬುಧಳು ಕೇಳುವುದು ನಿತ್ಯದಿ ಮತ್ಸರವ ಬಿಟ್ಟು ॥

(ಹರಿಕಥಾಮೃತಸಾರ)

## 18. ಅಂಶಾಧಿಕರಣ

ಸೂತ್ರಗಳು :-

1. ಓಂ ಅಂಶೋ ನಾನಾವ್ಯಪದೇಶಾತ್, ಅನ್ಯಥಾ ಚಾಪಿ ದಾಶಕಿತವಾಧಿತ್ವಮಧೀಯತ ಏಕೇ ಓಂ || ೪೩ ||
2. ಓಂ ಮಂತ್ರವರ್ಣಾತ್ ಓಂ || ೪೪ ||
3. ಓಂ ಅಪಿ ಸ್ಮರ್ಯತೇ ಓಂ || ೪೫ ||
4. ಓಂ ಪ್ರಕಾಶಾದಿವನ್ನೈವಂ ಪರಃ ಓಂ || ೪೬ ||
5. ಓಂ ಸ್ಮರಂತಿ ಚ ಓಂ || ೪೭ ||
6. ಓಂ ಅನುಜ್ಞಾಪರಿಹಾರೌ, ದೇಹಸಂಬಂಧಾತ್ ಜ್ಯೋತಿರಾದಿವತ್ ಓಂ || ೪೮ ||
7. ಓಂ ಅಸಂತತೇಶ್ಚಾವ್ಯತಿಕರಃ ಓಂ || ೪೯ ||
8. ಓಂ ಆಭಾಸ ಏವ ಚ ಓಂ || ೫೦ ||

ಜೀವನು ಈಶ್ವರನ ಅಂಶ ತಂದೆಯಿಂದ ಮಕ್ಕಳು ಪೋಷಿತರಾಗುವಂತೆ ಜೀವರು ಈಶ್ವರನಿಂದ ಪೋಷಿತರಾಗಿ ಉಪಜೀವ್ಯರಾಗಿ ಅವನ ಅಧೀನರಾಗಿ ಅವನ ಅಂಶತ್ಯೇನ ಇರುತ್ತಾರೆ. ಆದರೆ ಎಂದಿಗೂ ಈಶನ ಸಾಮ್ಯನಲ್ಲ.

ದಾಸಸಾಹಿತ್ಯ :-

1. ಅಂಶಿ ಅಂಶಾವೇಶಾಧಿಷ್ಠಾನ | ಅಂತರ್ಯಾಮಿಗಳ | ಸಂಶಯ ರಹಿತದಿ ರೂಪಗಳ ತಿಳಿದು | ಕ್ರೋಧಾದಿಗಳ ಳಿದು | ಸಂಸಾರಿಯ ಕರುಣಪ ಬಲಮಾಡಿ | ಓಂಸೆಗಳೀಡ್ಯಾಡಿ | ಹಂಸೋಪಾಸಕನಾಗೋತಪಕ | ಹೇ ಪ್ರಾಣಿ ನಿನ್ನ ಬ್ರಾಂತಿ ಬೆಡದೋ ಭಾಗ್ಯಪುರುಷಾನೆ ||

2. ಸ್ವಾತಂತ್ರಾ ಸ್ವಾತಂತ್ರ್ಯವೆಂಬುದನು | ವಿಪೇದಿಕ ತಿಳಿದು | ಸ್ವಾತಂತ್ರ್ಯ ಮೂಷ್ಯಿನು ಪರಿಯೆಂದು | ಧ್ಯಾನಕೆ ತಂದು | ಸ್ವಾತ್ರಂತ್ರ ಪಾಪಲ್ಲವೋಯುಂದು | ಅಪ್ಪನು ನೀನೆಂದು | ವ್ಯಾಪ್ತದರ್ಶಿ ಆಗೋತನಕ | ಹೇ ಪ್ರಾಣಿ ನಿನ್ನ | ಬ್ರಾಂತಿ ಬಿಡದೊ ಭಾಗ್ಯ ಪುರುಷನೆ ||

(ಶ್ರೀ ಗುರುಗೋಪಾಲವಿಠಲರು)

## 19. ಅದೃಷ್ಟಾಧಿಕರಣ

ಸೂತ್ರಗಳು :-

1. ಓಂ ಅದೃಷ್ಟನಿಯಮಾತ್ ಓಂ || ೫೧ ||

2. ಓಂ ಅಭಿಸಂಧ್ಯಾಧಿಷ್ವಪಿ ಚೈವಂ ಓಂ || ೫೨ ||

3. ಓಂ ಪ್ರದೇಶಾದಿತಿ ಚೇನ್ನ, ಅಂತರ್ಭಾವಾತ್ ಓಂ || ೫೩ ||

"ರೂಪಂರೂಪಂ" ಎನ್ನುವ ಶ್ರುತಿಯಂತೆ ಜೀವನಾದವನು ಪರಮಾತ್ಮನ ಪ್ರತಿಬಿಂಬನು.

**ದಾಸಸಾಹಿತ್ಯ:-**

1. ಬಿಂಬ ಭಾವ ಕ್ರಿಯ ದ್ರವ್ಯಾದ್ವೈತವನು । ತಿಳಿದು ಸರ್ವಗತ । ಬಿಂಬನೆ ಮಮ-ಸ್ವಾಮಿ ಗೋಪಾಲವಿಠಲ । ನಲ್ಲ ದಿನ್ನಿಲ್ಲ । ಎಂಬೋದರಿತು ಅನ್ಯ ಸ್ವತಂತ್ರ-ಮರೆದು । ಸರ್ವವ್ಯಾಪಾರ । ಬಿಂಬಕ್ರಿಯವರ್ಕಾಣೋತನಕ ಹೇ ಪ್ರಾಣಿ ನಿನ್ನ ಬ್ರಾಂತಿ ಬಿಡದೋ ಭಾಗ್ಯ ಪುರುಷನೆ ॥

**(ಶ್ರೀ ಗೋಪಾಲದಾಸರು)**

2. ಬಿಂಬ ನೀ ಎನಗೆ ಪ್ರತಿ ಬಿಂಬ ನಾ ನಿನಗೆ...

3. ಬಿಂಬ ಒಂದೇ ಪ್ರತಿ ಬಿಂಬ ಒಂದೇ ಎಂಬ ಶುದ್ಧಾಂಬರ ನೆರಳು ಕಪ್ಪಾಗೆ । ಕಪ್ಪಾಗೆ ಬಳಿಕ ನೀನೆಂಬೋದು ಪುಸಿಯಲ್ಲೋ ॥

**(ತತ್ವಸುವಾಲಿ - ಶ್ರೀ ಜಗನ್ನಾಥದಾಸರು)**

o-o-o-o-o

## ದ್ವಿತೀಯಾಧ್ಯಾಯ ಚತುರ್ಥಪಾದ

### 1. ಪ್ರಾಣೋತ್ಪತ್ತ್ಯಧಿಕರಣ

**ಸೂತ್ರಗಳು :-**

**1. ಓಂ ತಥಾ ಪ್ರಾಣಾಃ ಓಂ || ೧ ||**

**2. ಓಂ ಗೌಣ್ಯಸಂಭವಾತ್ ಓಂ || ೨ ||**

**3. ಓಂ ಪ್ರತಿಜ್ಞಾನುಪರೋಧಾಚ್ಚ ಓಂ || ೩ ||**

ಆಕಾಶಾದಿಗಳು ಹೇಗೆ ಉತ್ಪತ್ತಿಯಾದವೋ ಹಾಗೆಯೇ ಇಂದ್ರಿಯಗಳೂ ಉತ್ಪತ್ತಿಯಾದುವೆಂದು ತಿಳಿಯತಕ್ಕದ್ದು. ಆದರೆ ಅವುಗಳು ಹರಿಯ ಆಧೀನ.

ಇಂದ್ರಿಯಂಗಳನಿತ್ತೆ ವಿಷಯವನಿತ್ತೆ ಅದಕ್ಕೆ
ಒಂದರ ಸಾಧನಗಳೊದಕ್ಕಾಗಿವೆ ಅಯ್ಯ

**(ಶ್ರೀ ಗೋಪಾಲದಾಸರು)**

ಗಂಧರಸರೂಪಸ್ಪರುಶ ಶ-
ಬ್ದೊಂದು ತಾನಲ್ಲದರದರ ಪೆಸ-
ರಿಂದಕರೆಸುತ ಜೀವರಿಗೆ ತರ್ಪಕನು ತಾನಾಗಿ
ಪೊಂದಿಕೊಂಡಿಹ ಪರಮ ಕರುಣಾ-
ಸಿಂಧು ಶಾಶ್ವತ ಮನವೆ ಮೊದಲಾ-
ದಿಂದ್ರಿಯ ಗಳೊಳಗಿದ್ದು ಭೋಗಿಸುತಿಹನು ವಿಷಯಗಳ ॥

(ಹರಿಕಥಾಮೃತಸಾರ)

## 2. ತತ್ಪ್ರಾಗಧಿಕರಣ

**ಸೂತ್ರ :-**

**1. ಓಂ ತತ್ಪ್ರಾಕ್‌ಶ್ರುತೇಶ್ಚ ಓಂ** ॥ ೪ ॥

"ಮನಃ ಸರ್ವೇಂದ್ರಿಯಾಣಿ ಚ" ಎಂಬಿರೋಣದರಿಂದ ಮನಸ್ಸಿಗೆ ಉತ್ಪತ್ತಿ ಕೂಡುತ್ತಿದೆ

**ದಾಸಸಾಹಿತ್ಯ :-**

ಹರಿಯೆ ನಿನ್ನಾಧೀನ ಜ್ಞಾನೇಂದ್ರಿಯಗಳು । ಹರಿಯೆ ನಿನ್ನಾಧೀನ ಕರ್ಮೇಂದ್ರಿಯಗಳು । ಹರಿಯು ನಿನ್ನಾಧೀನ ಪಂಚ ಭೂತಾತ್ಮಗಳು । ಹರಿಯೆ ನಿನ್ನಾಧೀನ ಮನ ಚಿತ್ತಾದಿಗಳು । ಹರಿಯು ನಿನ್ನಾಧೀನ ಸಕಲ ಚೇತನವು । ಹರಿಯೇ ನಿನ್ನಾಧೀನ ಸಕಲ ಚೇಷ್ಟೆಗಳು । ಹರಿಯು ನೀ ನೇಮಿಸಿದ ಕಾರಣವನ್ನು । ಶರೀರದೊಳಗೆಲ್ಲಾ ಭರಿತ-ವಾಗಿದೆ ।

ಪೊರಗಿಪ್ಪ ಸರಕು ಬೆಲೆಮಾಡಿದಂತೆ ಈ । ಸರಕುಧನವಿತ್ತು ತುಂಬಲಿಲ್ಲ । ಶರಣರ ಮೊರೆಕೇಳೊ ವಿಜಯವಿಠಲರೇಯ । ಮರದು ಬಿಡುವುದಲ್ಲ । ಶರಣರ ಮೊರೆ ॥

2. ಜನಿಸಿದ ಮನವನ್ನು ಮಾತ ಕೇಳದು ಕಾಣೋ ಗೋವಿಂದ....

(ಶ್ರೀ ವಿಜಯದಾಸರು)

## 3. ತತ್ಪೂರ್ವಕತ್ವಾಧಿಕರಣ

**ಸೂತ್ರ :-**

**1. ಓಂತತ್ಪೂರ್ವಕತ್ವಾದ್ವಾಚ ಓಂ** ॥ ೫ ॥

ವಾಗಿಂದ್ರಿಯಕ್ಕೂ ಉತ್ಪತ್ತಿ ಇದೆ. ಎಂದು ಸಾಧಿಸಿದ್ದಾರೆ.

**ದಾಸಸಾಹಿತ್ಯ :-**

ಶತಕೋಟಿ ಮೂಲರಾಮಾಯಣ ಪುರಾಣಗಳು । ಸ್ಮೃತಿ ಸಮೂಹಗಳು ಪುರಾಣಂಗಳು ॥ ಇತರ ವೈದೀಕ ಸು ಶಬ್ದಗಳು ಜನಿಸಿದವು ಸಂ-। ತತವಾಚ್ಯನಾನು ಸಂದೇಹವಿಲ್ಲ.

## 4. ಸಪ್ತಗತ್ಯಧಿಕರಣ

**ಸೂತ್ರಗಳು :-**

**1. ಓಂ ಸಪ್ತ, ಗರ್ತೇರ್ವಿಶೇಷಿತತ್ವಾಚ್ಚ ಓಂ** || ೬ ||

**2. ಓಂ ಹಸ್ತಾದಯಸ್ತು ಸ್ಥಿತೇತೋ ನೈವಂ ಓಂ** || ೭ ||

ಇಂದ್ರಿಯಗಳ ಸಂಖ್ಯೆ ಏಳೇ ಅಥವಾ ಹನ್ನೇರಡೇ ಎಂಬ ಸಮಸ್ಯೆ ಬರುತ್ತದೆ. ಏಕೆಂದರೆ "ಸಪ್ತಪ್ರಾಣಃ ಪ್ರಭವಂತಿ" ಹಾಗೂ "ದ್ವಾದಶವಾ ಏತೇ ಪ್ರಾಣಃ" ಎಂಬ ಪ್ರಶ್ನೆ ಬಂದಾಗ ಇಂದ್ರಿಯಗಳಲ್ಲಿ ಜ್ಞಾನೇಂದ್ರಿಯಗಳು ಏಳು, ಕರ್ಮೇಂದ್ರಿಯಗಳು ಐದು, ಒಟ್ಟು ಹನ್ನೆರಡು ಎಂದು ನಿರ್ಣಯವು

**ದಾಸಸಾಹಿತ್ಯ :-**

ಜ್ಞಾನಾಕರ್ಮೇಂದಿಯಗಳನಿಗ್ರಹಿಸಿ । ಜ್ಞಾನವ ಸಂಗ್ರಹಿಸಿ।ಹಾಸಿ ವೃದ್ಧಿಗಳನ್ನು ತಾ ಸಹಿಸಿ ಅತಿ ಹೀನತೆಯನ್ನು ವಹಿಸಿ ॥ ಮಾನಾಪಮಾನಸಮಾನವೆಂದರಿತು ಸದಾನದಿ ಹರಿ ಗುಣಗಾನ ಮಾಳ್ಪುದು । ಸಾಮಾನ್ಯವಲ್ಲ ಹರಿ ಸೇವೆ ಪಾಮರಜನರಿಗೆ ॥

**(ಶ್ರೀ ಶ್ರೀಪತಿವಿಠಲರು)**

## 5. ಅಣ್ವಧಿಕರಣ

**ಸೂತ್ರ :- ಓಂ ಅಣವಶ್ಚ ಓಂ** || ೮ ||

ಪ್ರಾಣಗಳು ಅಣುವೋ ವ್ಯಾಪ್ತವಾದವೋ ಎಂದರೆ ಪ್ರಾಣಗಳು ಅಣುವು ಇಲ್ಲ-ವಾದಲ್ಲಿ ಸರ್ವದಾ ಅಪರೋಕ್ಷ ಜ್ಞಾನಸಿದ್ಧಿ ಹೇಳಬೇಕಾಗುವುದು.

**ದಾಸಸಾಹಿತ್ಯ :-**

ಕುದುರೆ ಬಾಲದ ಕೊನೆಯ ಕೂದಲು
ತುದಿ ವಿಭಾಗವ ಮಾಡಿ ಶತವಿಧ
ವದರೊಳೊಂದನು ನೂರು ಭಾಗವ ಮಾಡಲೆಂತಿಹುದೋ ॥
ವಿಧಿಭವಾದಿ ಸಮಸ್ತ ದಿವಿಜರ
ಮೊದಲು ಮಾಡಿ ತೃಣಾಂತ ಜೀವರೊ
ಳಧಿಕ ನ್ಯೂನತೆಯಿಲ್ಲ ವೆಂದಿಗು ಜೀವ ಪರಮಾಣು ॥

**(ಶ್ರೀ ಹರಿಕಥಾಮೃತಸಾರ)**

## 6. ಶ್ರೇಷ್ಠಾಧಿಕರಣ

**ಸೂತ್ರಗಳು :-**

**1.** ಓಂ ಶ್ರೇಷ್ಠಶ್ಚ ಓಂ || ೯ ||

**2. ಓಂ ನ ವಾಯುಕ್ರಿಯೇ, ಪೃಥಗುಪದೇಶಾತ್ ಓಂ || ೧೦ ||**

ಯಾವ ಜೀವನ ದೇಹಕ್ಕೆ ಮುಖ್ಯಪ್ರಾಣನ ಸಂಯೋಗವಾಗುವುದೋ ಆಗ ಆಜೀವನ ಉತ್ಪತ್ತಿ. ಯಾವಾಗ ಪ್ರಾಣನ ನಿರ್ಗಮನವೊ ಆಗ ಜೀವನಿಗೆ ಮರಣ ಎಂದರೆ ಹಾಗಲ್ಲ ಪ್ರಾಣನೂ ಸಹ ಮಾಹ್ಮಾತ್ಮೆವುಳ್ಳ ಶ್ರೀವಿಷ್ಣುವಿನಿಂದ ಉತ್ಪನ್ನ-ವಾಗುತ್ತಲಿದ್ದಾನೆ ಎಂದು ತಿಳಿಯಬೇಕು.

**ದಾಸಸಾಹಿತ್ಯ :-**

1. ಪ್ರಾಣ ಪಂಚಕರೂಪ ಪ್ರಾಣಾಂತರಾತ್ಮಕನೆ । ಪ್ರಾಣಿಗಳೊಳಗಿದ್ದು ಪ್ರತಿದಿನಾ । ಪ್ರತಿದಿನ ಪ್ರದ್ಯುಮ್ನ ಪ್ರಾಣಮಯನೆಂದು ಕರೆಸೂವಿ ॥

2. ಸತ್ಯಲೋಕವ ಸದನ ತತ್ವಾಭಿಮಾನಿಗಳು । ಭೃತ್ಯರನಿಸುವರು ಮಹ-ಲಕ್ಷ್ಮಿ । ಮಹಲಕ್ಷ್ಮಿ ಜನನಿ । ಪುರುಷೋತ್ತಮನು ಜನಕ ಎನಿಸೂವ ॥

**(ತತ್ವಸುವ್ವಾಲಿ - ಶ್ರೀ ಜಗನ್ನಾಥದಾಸರು)**

## 7· ಚಕ್ಷುರಾಧಿಕರಣ

**ಸೂತ್ರಗಳು :-**

**1. ಓಂ ಚಕ್ಷುರಾದಿವತ್ತು, ತತ್ಸಹಶಿಷ್ಟ್ಯಾದಿಭ್ಯಃ ಓಂ || ೧೧ ||**

**2. ಓಂ ಅಕರಣತ್ವಾಚ್ಚ ನ ದೋಷಃ, ತಥಾ ಹಿ ದರ್ಶಯತಿ ಓಂ || ೧೨ ||**

ಶ್ರೇಷ್ಠ ಸ್ವಾತಂತ್ರ್ಯ ಅಸ್ವಾತಂತ್ರ್ಯ ಪ್ರುತಿ ವಿರೋಧ ಘಟನಾದ್ವಾರ ಶ್ರೇಷ್ಠಗೆ ಪರಮಾತ್ಮಾಧೀನತ್ವವು ಸಾಧಿತವಾಗಿದೆ. ಅಂದರೆ ಜಗತ್ತಿನ ಚೇಷ್ಟತಗೆ ಕಾರಣ-ನಾಗಿರುವ ಮುಖ್ಯಪ್ರಾಣನೂ ಕೂಡ ಶ್ರೀಹರಿಯ ಆಧೀನನು.

**ದಾಸಸಾಹಿತ್ಯ :-**

1. ಪ್ರಾಣನ ಪ್ರಾಣನ ಗುಣ ಗಣ ಮಂಡಿತ ವೇಣುಗೋಪಾಲವಿಠಲ ಕಲ್ಯಾಣನ
   ಕೃಷ್ಣನ ನೋಡಿದೆ ಸರ್ವೋತ್ಕೃಷ್ಣನ ಪಾಡಿದೆ.

2. ಸಿರಿಯಲ್ಲಯು ನೀನೆ ಪರಮೇಷ್ಟಿಯಲ್ಲಿಯು ನೀನೆ
   ಮರುತ ವಾಣಿ ಭಾರತಿ ಎಲ್ಲರಲ್ಲಿಯು ನೀನೆ
   ಉರುಗನಲ್ಲಿಯು ನೀನೆ ಗರುಡನಲ್ಲಿಯು ನೀನೆ

ಗಿರಿಜಾಪತಿಯಲ್ಲಿಯೂ ಸುರಪತಿಯಲ್ಲಿಯೂ ನೀನೆ.

- - - - - - - - - - - - - - - -

ಧುರ ವಿಕ್ರಮ ನಮ್ಮ ಗೋಪಾಲವಿಠಲ
ದೂರ ದೂರ ಅತಿ ದೂರತರನು ನೀನೆ ಅಂತಿಕಾಂತಿಕ ನೀನೆ ॥

**(ಸುಳಾದಿ - ಶ್ರೀ ಗೋಪಾಲದಾಸರು)**

## 8. ಪಂಚವೃತ್ತ್ಯಧಿಕರಣ

**ಸೂತ್ರ :-**

**1. ಓಂ ಪಂಚವೃತ್ತಿರ್ಮನೋವದ್ವ್ಯಪದಿಶ್ಯತೇ ಓಂ** ॥ ೧೩ ॥

ಪ್ರಾಣ, ಅಪಾನ. ವ್ಯಾನ, ಉದಾನ, ಸಮಾನ ಈ ಐದೂ ಮುಖ್ಯ ಪ್ರಾಣನ ಸ್ವರೂಪಗಳು. ಎಲ್ಲದರಿಂದಲೂ ಶ್ರೀಮುಖ್ಯಪ್ರಾಣದೇವರು ಸದಾ ಭಗವದ್ ಕಾರ್ಯಸಾಧಕರಾಗಿ ಪರಮಾತ್ಮನಿಗೆ ನಿರ್ವ್ಯಾಜ ಸೇವೆ ಮಾಡುತ್ತಲಿರುವರು.

**ದಾಸಸಾಹಿತ್ಯ :-**

ಪ್ರಾಣದೇವ ನೀನಲ್ಲದೆ ಕಾಯ್ವರ । ಕಾಣೆನೋ ಜಗದೊಳಗೆ-ಮುಖ್ಯ ॥ ಪ ॥

ಪ್ರಾಣಾಪಾನ ವ್ಯಾನೋದಾನ ಸ । ಮಾನನೆನಿಪ
ಮುಖ್ಯಪ್ರಾಣ ನೀನಲ್ಲದೆ ॥ ಅ ॥

ಭೂತೇಂದ್ರಿಯ ದಾಧಿನಾಥ ನಿಯಾಮಕ । ಆತ್ಮೈಜಸ ಹರನ
ತಾತನೆನಿಪ ಜಗನ್ನಾಥವಿಠಲ ಪ್ರೀತಿಪಾತ್ರನಾದೆ - ಮುಖ್ಯ ॥ ೫ ॥

**(ಶ್ರೀ ಜಗನ್ನಾಥದಾಸರು)**

## 9. ಅಣ್ವಧಿಕರಣ

**ಸೂತ್ರ :-**

**1. ಓಂ ಅಣುಶ್ಚ ಓಂ** ॥ ೧೪ ॥

ಮುಖ್ಯಪ್ರಾಣನು ಅಣುವೋ, ವ್ಯಾಪ್ತನೋ ಅಂದರೆ ಮುಖ್ಯಪ್ರಾಣನು ಅಣು ವಾಗಿದ್ದು ದೇಹದ ಹೊರಗಿನಿಂದ ಇರುವ ಮುಖ್ಯ ವಾಯುರೂಪದಿಂದ ವ್ಯಾಪ್ತನೂ- ಆಗಿದ್ದಾನೆ.

**ದಾಸಸಾಹಿತ್ಯ :-**

ಅಣುವಿನೊಳಗಣುವವನು ಘನಕೆ ಘನತರನವನು
ಅಣು ಮಹದ್ವಿಲಕ್ಷಣ, ಕಲ್ಯಾಣ ಗುಣಜ್ಞಾನ ಘನ ಲಕ್ಷಣ
ಸಂಪೂರ್ಣ ಮನಮುಟ್ಟಿ ಕರೆದಾಕ್ಷಣ, ಬಂದೊದಗಿ

ಕುಣಿವ ಲಕ್ಷ್ಮೀವಕ್ಷನ-ಅನಪೇಕ್ಷಣ
ಸ್ಮರಿಸು ಸಂತತ ಹರಿಯನು.

**ಅಧಿಷ್ಠಾನ :-** ಪ್ರಾಣದೇವ ನೀನಲ್ಲದೆ ಕಾಯ್ವರ ಕಾಣನೋ ಜಗದೊಳಗೆ ॥ ಪ ॥

ಪ್ರಾಣಾಪಾನ ವ್ಯಾನೋದಾನ । ಸಮಾನನೆನಿಪ ಮುಖ್ಯ ಪ್ರಾಣ ನೀ ॥ ಅ ॥
ಪರಿಸರ ನೀನಿರೆ ಹರಿ ತಾ ಸಿರುವನು । ಇರದಿರೆ ತಾನಿರನು.

ಕರಣ ನಿಯಾಮಕ ಸುರರ ಗುರುವೆ ನೀ । ಕರುಣಿಸೆ ಕರುಣಿಸುವಾ ॥ ೪ ॥

## 10. ಜ್ಯೋತಿರಾದ್ಯಧಿಕರಣ

**ಸೂತ್ರಗಳು :-**

**1. ಓಂ ಜ್ಯೋತಿರಾದ್ಯಧಿಷ್ಠಾನಂ ತು ತದಾಮನನಾತ್ ಓಂ ॥ ೧೫ ॥**

**2. ಓಂ ಪ್ರಾಣವತಾ, ಶಬ್ದಾತ್ ಓಂ ॥ ೧೬ ॥**

**3. ಓಂ ತಸ್ಯ ಚ ನಿತ್ಯತ್ವಾತ್ ಓಂ ॥ ೧೭ ॥**

ಚಕ್ಷುರಾದಿ ಇಂದ್ರಿಯಗಳು ಜೀವಾಧೀನವೋ ಅಥವಾ ಬ್ರಹ್ಮಾಧೀನವೋ ಎಂಬ ಶಂಕೆ ಬಂದಾಗ ಸಕಲ ಇಂದ್ರಿಯಗಳೂ ಬ್ರಹ್ಮಾಧೀನವೇ ಸಾಧಿತವಾಗಿದೆ. ಜೀವಾಧೀನತ್ವವು ಕೇವಲ ಸಂದರ್ಭಕನುಗುಣವಾಗಿ ಆ ಮುಖ್ಯತ ತಿಳಿಯತಕ್ಕದ್ದು ಜೀವ ಅನಾದಿಯಾದ್ದರಿಂದ.

**ದಾಸಸಾಹಿತ್ಯ :-**

ಬಿಂಬ ಭಾವಕ್ರಿಯ ದ್ರವ್ಯಾದ್ವೈತವನು ತಿಳಿದು । ಸರ್ವಗತ ಬಿಂಬನೇ ಮಮ-ಸ್ವಾಮಿ ಗೋಪಾಲವಿಠಲನಲ್ಲದಿಸ್ಸಿಲ್ಲ. ಎಂಬೊದರಿತು ಅನ್ಯ ಸ್ವತಂತ್ರವ ಮರೆದು, ಸರ್ವವ್ಯಾಪಾರ ಬಿಂಬಕ್ರಿಯವ ಕಾಣೋತನಕ, ಹೇ ಪ್ರಾಣಿ ನಿನ್ನ ಭ್ರಾಂತಿ ಬಿಡದೆಂ ಭಾಗ್ಯ ಪುರುಷನೆ.

**(ಶ್ರೀ ಗೋಪಾಲವಿಠಲರು)**

## 11. ತ ಇಂದ್ರಿಯಾಣ್ಯಧಿಕರಣ

**ಸೂತ್ರಗಳು :-**

**1. ಓಂ ತ ಇಂದ್ರಿಯಾಣಿ, ತದ್ವ್ಯಪದೇಶಾತ್, ಅನ್ಯತ್ರ ಶ್ರೇಷ್ಠಾತ್ ಓಂ ॥ ೧೮ ॥**

**2. ಓಂ ಭೇದಶ್ರುತೇಃ ಓಂ ॥ ೧೯ ॥**

3. ಓಂ ವೈಲಕ್ಷಣ್ಯಾ ಚ್ಚ ಓಂ || ೨೦ ||

ಇಂದ್ರಿಯತ್ವವು ಎಲ್ಲಾ ಪ್ರಾಣಗಳಿಗೋ ಅಥವಾ ಪ್ರಾಣನಿಂದ ಇತರಗಳಾದ ಹನ್ನೆರಡಕ್ಕೊ ಎಂದರೆ ಮುಖ್ಯಪ್ರಾಣನನ್ನು ಬಿಟ್ಟು ಹನ್ನೆರಡೇ ಇಂದ್ರಿಯಗಳಿವೆ. ಆದ್ದರಿಂದ ಮುಖ್ಯಪ್ರಾಣನು ಸರ್ವ ಪ್ರಾಣಿಗಳ ಇಂದ್ರಿಯಗಳಿಗೂ ನಿಯಾಮಕನು. ಮುಖ್ಯಪ್ರಾಣನಿಗೆ ಇತರ ಇಂದ್ರಿಯಗಳಂತೆ ಈಶಾಧೀನತ್ವವಿದ್ದರೂ ಕೇವಲ ಈಶ್ವ-ರೇಚ್ಛಾಧೀನವಾದ ಪ್ರವೃತ್ತಿಯು. ಇತರ ಇಂದ್ರೀಯಗಳಿಗೆ ಜೀವ ಪ್ರಯತ್ನಾಪೇಕ್ಷೆ-ಯಿಂದಲೇ ಪ್ರವೃತ್ತಿ ಇದೆ. ಎಂಬ ಈವೈಲಕ್ಷಣವನ್ನು ತಿಳಿಯಬೇಕು.

**ದಾಸಸಾಹಿತ್ಯ:-**

1. ಇಂದ್ರಿಯಂಗಳ ನಿಯಾಮಕನೆ, ಗುಣ ವೃಂದ ನಿರ್ಜರ ನಾಯಕನೆ.
ಪಾಪಸಿಂಧು ಬತ್ತಿಪ ಪಾವಕನೆ, ನಿಜ ಬಂಧು ಸಂಸೃತಿ ತಾರಕನೆ.
. . . . .ಪವಮಾನ ಶ್ರೀಮದ್ಗುರುವೆ ಪರಾಕು

**(ಶ್ರೀ ವಿಜಯದಾಸರು)**

2. ಇವನ ಪ್ರೇರಣೆ ಹರಿಯ ಪ್ರೇರಣೆ । ಇವನ ಸೇವೆಯು ಹರಿಯ ಸೇವೆ-ಯು । ಇವನ ಬಲವೇ ಪ್ರಬಲವು । ಇವನು ಒಲಿಯಲು ಹರಿಯುವಲಿಯುವ । ಪ್ರಾಣವಿಲ್ಲವು ಇವನು ಇಲ್ಲದಿರೆ । ಪ್ರಾಣಪತಿ ಗೋಪಾಲವಿಠಲನೆ ಕಾಣಿಸಿ ತೋರ್ಪ ಕರುಣಿ ಮುಖ್ಯಪ್ರಾಣ.

**(ಶ್ರೀ ಗೋಪಾಲವಿಠಲರು)**

## 12. ಸಂಜ್ಞಾಧಿಕರಣ

**ಸೂತ್ರ :-**

**1. ಓಂ ಸಂಜ್ಞಾಮೂರ್ತಿಕ್ಲೃಪ್ತಿಸ್ತು ತ್ರಿವೃತ್ಕುರ್ವತಃ, ಉಪದೇಶಾತ್ ಓಂ || ೨೧ ||**

ಈ ಪ್ರಪಂಚವು ಶ್ರೀಹರಿಯಿಂದಲೋ ಅಥವಾ ಬ್ರಹ್ಮನಿಂದಲೋ ಈ ಸೃಷ್ಟಿ ಎಂಬ ಶಂಕೆ ಬಂದಾಗ "ಸರ್ವಾಣಿ ರೂಪಾಣಿ" ಎಂಬ ಶ್ರುತಿಯಂತೆ ಅದು ವಿಷ್ಣು-ವಿಗೇನೇ ಅನುಗುಣ. "ಬ್ರಹ್ಮಾದ್ಯಾಸ್ತದವಾಂತರಾಃ" ಎನ್ನುವುದು ಕೇವಲ ಅವಾಂತರ ಸೃಷ್ಟಿ ಪರವಾದದ್ದು.

**ದಾಸಸಾಹಿತ್ಯ :-**

1. ಸೃಷ್ಟಿ, ಸ್ಥಿತಿ, ಲಯ, ಕಾರಣ ಗೋವಿಂದ । ಈಹರಿಮಹಿಮೆಯ

ತಿಳಿಯೋದೆ ಆನಂದ । ಗೋವಿಂದ ಸಿನ್ನಾನಂದ.

**(ಶ್ರೀ ಪುರಂದರದಾಸರು)**

ನಿತ್ಯನಿರ್ಮಲನಿಗಮ ವೇದ್ಯೋ-
ತ್ಪತ್ತಿ ಸ್ಥಿತಿಲಯ ದೋವರ್ಜಿತ-
ಸ್ತುತ್ಯ ಪೂಜ್ಯ ಪ್ರಸಿದ್ಧ ಮುಕ್ತಾಮುಕ್ತಗುಣ ಸೇವ್ಯ ॥
ಸತ್ಯ ಕಾಮ ಶರಣ್ಯ ಶಾಶ್ವತ
ಭೃತ್ಯವತ್ಸಲ ಭಯನಿವಾರಣ
ಅತ್ಯಧಿಕಸಂಪ್ರಿಯತಮ ಜಗನ್ನಾಥ ಮಾಂ ಪಾಹಿ ॥

**(ಶ್ರೀ ಹರಿಕಥಾಮೃತಸಾರ)**

## 13. ಮಾಂಸಾಧಿಕರಣ

**ಸೂತ್ರಗಳು :-**

**1. ಓಂ ಮಾಂಸಾದಿ ಭೌಮಂ, ಯಥಾ ಶಬ್ದ-**
**ಮಿತರಯೋಶ್ಚ ಓಂ ॥ ೨೨ ॥**

**2. ಓಂ ವೈಶೇಷ್ಯಾತ್ತು ತದ್ವಾದಸ್ತದ್ವಾದಃ ಓಂ ॥ ೨೩ ॥**

ಈ ಶರೀರವು ಜಲದಿಂದ ಉತ್ಪನ್ನವಾಗಿದೆ ಎಂದು ಕೌಂಡಿನ್ಯಶ್ರುತಿ, ಮಾಂಸಾದಿಗಳಿಂದ ಎಂದು ಭಾರತದಲ್ಲಿದೆ ಶರೀರವು ಪೃಥವಿಯನ್ನು ಸೇರುತ್ತದೆ. ಎಂದು ಬೃಹದಾರಣ್ಯಕಶ್ರುತಿ. ಈ ದೇಹಕ್ಕೆ ಅನೇಕ ಭೂತಗಳು ಕಾರಣವಾದಾಗ್ಯೂ ಆಯಾವ ಭೂತ ವಿಶೇಷ ಸಂಯೋಗವನ್ನು ಅಪೇಕ್ಷಿಸಿ ವಿಶಿಷ್ಟ ಉಕ್ತಿಯು ಉಪಪನ್ನವು "ಯತ್ಕರಿಣಂ ಸಾ ಪ ಥಪೀ" ಇತ್ಯಾದಿ ಶ್ರುತಿಗಳಿಂದ ಶರೀರವು ಭೂತೋಪಾದಾನಕವೇ ಆಗಿರುವುದು.

1. ಮಾಂಸರಕ್ತದ ಮಡುವಿನಲಿ ನವ-
ಮಾಸ ಜನನಿಯ ಜಠರದೊಳಗಿರು-
ವಾ ಸಮಯದಲಿ ವೃತ್ತಿಯನು ಕಲ್ಪಿಸಿದ ಪ್ರಭುವಾರು ॥

2. ಪಂಚಭೂತದ ಕಾಯದೊಳು ಸೇ-
ವಂಚಿಸದೆ ಇರುತಿರಲು ಪೂರ್ವದ
ಸಂಚಿತದ ಫಲವೆನ್ನಲೇಕಿದ ಮರಳುತನದಿಂದ ॥

3. ಎತ್ತಿದೆನು ನಾನಾ ಶರೀರವ
ಹೊತ್ತು ಹೆದತ್ತಲಸಿದೆನು ಸಲೆ ಬೇ-

ಸತ್ತು ನಿನ್ನಯ ಪಾದವ ಕಾಣದೆ ತೊಳಲಿಬಳಲಿದೆನು ॥
ಸತ್ತು ಹುಟ್ಟುವ ಹುಟ್ಟಿ ಹಿಗ್ಗುವ
ಸುತ್ತು ತೊಡಕನು ಮಾಡಿಸಲೆ ಪುರು-
ಷೋತ್ತಮನೆ ಮನವೊಲಿದು ರಕ್ಷಿಸು ನಮ್ಮನನವರತ ॥

4. ಎಂಟು ಗೇಣಿನದೇಹ ರೋಮಗ-
ಳೆಂಟು ಕೋಟಿಯು ಕೀಳ್ಗಳರವ
ತ್ತೆಂಟು ಮಾಂಸಗಳಿಂದ ಮಾಡಿದ ಮನೆಯಮನವೊಲಿದು ॥
ನೆಂಟ ನೀ ನಿರ್ದಗಲಿದೊಡೆ ಒಣ
ಹೆಂಟೆಯಲಿ ಮುಚ್ಚುವರು ದೇಹದ
ಲೆಂಟೇಫಲಪುರುಷಾರ್ಥ ರಕ್ಷಿಸು ನಮ್ಮ ನನವರತ ॥
(ಹರಿಭಕ್ತಿಸಾರ - ಕನಕದಾಸರು)

o—o—o—o—o

# ತೃತೀಯಾಧ್ಯಾಯ ಪ್ರಥಮಪಾದ

## 1. ತದಂತರಾಧಿಕರಣ

**ಸೂತ್ರ :**

**1. ಓಂ ತದಂತರ ಪ್ರತಿಪತ್ತೌ ರಂಹತಿ ಸಂಪರಿಷ್ವಕ್ತಃ ಪ್ರಶ್ನನಿರೂಪಣಾಭ್ಯಾಂ ಓಂ** || ೧ ||

ಜೀವನಿಗೆ ದೇಹನಾಶವಾದರೂ ಭೂತ ಸಂಬಂಧ ಉಂಟು. ಪ್ರವಾಹದಂತೆ ದೇಹಾದಿಗಳನ್ನು ಹೊಂದಿರುತ್ತಾನೆ, ಆದ್ದರಿಂದ ವೈರಾಗ್ಯಾದಿಗಳು ಅತ್ಯಾವಶ್ಯಕ.

**ದಾಸಸಾಹಿತ್ಯ :**

ದಾಸನಾಗೊ ಭವಪಾಶನೀಗೋ- ವಿಶೇಷನಾಗೊ || ಪ ||

ಹಸು ಕಾಯುಂಗಳ ಕಳೆದು ಎಂಬತ್ನಾಲ್ಕು ಲಕ್ಷ ಜೀವ
ರಾಶಿಯನ್ನು ದಾಟಿ ಬಂದೆ, ಈ ಶರೀರ ತಾನಲ್ಲ-ತನ್ನದಲ್ಲ
ಆಸೆ ಥರವಲ್ಲ ಸ್ಥಿರವಲ್ಲ ಮುಂದೆ ಬಾಹೋದಲ್ಲ
ಆಶಾಕ್ಲೇಶ ದೋಷವೆಂಬ ಅಬ್ಧಿಯೊಳು ಮುಳುಗಿ ಯಮನ
ಪಾಶಕ್ಕೊಳಗಾಗದೆ ಸಿದ್ಧೋಶಿಯನುಗೋ, ಸಂತೋಷಿಯಾಗೋ || ೧ ||

## 2. ತ್ರ್ಯಾತ್ಮಕತ್ವಾಧಿಕರಣ

**ಸೂತ್ರ :**

**1. ಓಂ ತ್ರ್ಯಾತ್ಮಕತ್ವಾತ್ತು ಭೂಯಸ್ತ್ವಾತ್ ಓಂ** || ೨ ||

ಮೃತನಾದ ಜೀವನ ಜೊತೆಯಲ್ಲಿ ಜಲವೊಂದೇ ಅಲ್ಲ ಸರ್ವ ಭೂತಗಳೂ ಒಟ್ಟಿಗೆ ಹೋಗುತ್ತಲಿದೆ.

**ದಾಸಸಾಹಿತ್ಯ :**

ಶ್ರೀವ್ಯಾಸತತ್ವಜ್ಞರ(ವಿಜಸ್ವಾಮಿಗಳ) ವಿಸ್ತಾರಕನ್ನಡ ಗದ್ಯರೂಪಕ "ಮಾನಸ ಸ್ಮೃತಿ"ಯಿಂದ ತಿಳಿಯುವುದು.

2. ಕರ್ತೃ ಎನಿಸುವ ನಮ್ಮ ಕರ್ತೃವೆ ತಾನಾಗಿ
ಸೂತ್ರಧಾರ ಗೋಪಾಲವಿಠಲ ಕಾಯ್ದ

(ಶ್ರೀ ಗೋಪಾಲದಾಸರು)

## 3. ಪ್ರಾಣಗತ್ಯಧಿಕರಣ

**ಸೂತ್ರ :**

**1. ಓಂ ಪ್ರಾಣಗತೇಶ್ಚ ಓಂ** || ೩ ||

ಇಂದ್ರಿಯಗಳು ಜೀವನಿಂದ ಕೂಡಿಕೊಂಡೆ ಗಮಸುವುದು
ಅಂತೆಯೇ ಭೂತಗಳು.

**ದಾಸಸಾಹಿತ್ಯ :**

ಇಂದ್ರಿಯಂಗಳನಿತ್ತ ಅದಕೆ ವಿಷಯಂಗಳಿತ್ತೆ
ಒಂದರ ಸಾಧನಗಳೊಂದಕ್ಕಾಗಿವೆ ಅಯ್ಯ
. . . . . . . . . . . . , . , . . . .
ಇಂದ್ರಿಯಂಗಳು ಎಲ್ಲ ಈವರ ಒಟ್ಟಾಗ
ಮುಂದಿನಗತಿ ಏನೋ ಮುಕುಂದನೆ
ಕಂದರ್ಪ ಜನಕ ಗೋಪಾಲವಿಠಲ ಕೃಷ್ಣ
ಮುಂದೇನುಗತಿ ಎನಗ ಮುಕುಂದನೆ

**(ವೈರಾಗ್ಯ ಸುಳಾದಿ-ಶ್ರೀ ಗೋಪಾಲದಾಸರು)**

## 4. ಅಗ್ನ್ಯಾದ್ಯಧಿಕರಣ

**ಸೂತ್ರ :**

**1. ಓಂ ಅಗ್ನ್ಯಾದಿ ಶ್ರುತೇರಿತಿ ಚೇನ್ನ, ಭಾಕ್ತತ್ವಾತ್ ಓಂ** || ೪ ||

ಇಂದ್ರಿಯಗಳು ಪಂಚಭೂತಗಳೂ ಜೀವನಕೂಡ ಹೋಗುವುದರಿಂದ ಉತ್ತಮ ಸಾಧನೆಯನ್ನು ಅನುಷ್ಠಾನ ಮಾಡಬೇಕು.

**ದಾಸಸಾಹಿತ್ಯ :**

ನಾನುನೀನು ಎನ್ನದಿರು ಹೀನ ಮಾನವಾ || ಪ ||
ಜ್ಞಾನದಿಂದ ನಿನ್ನ ನೀನೆ ತಿಳಿದು ನೋಡಲೊ || ಪ ||
ಹೆಣ್ಣು ಹೊನ್ನು ಮಣ್ಣು ಮೂರು ನಿನ್ನದೇನಲೋ
ಅನ್ನದಿಂದ ಬಂದಕಾಮ ನಿನ್ನದೇನಲೊ
ಕರ್ಣದಿಂದ ಬರುವ ಘೋಷ ನಿನ್ನದೇನಲೊ
ನಿನ್ನಬಿಟ್ಟು ಪೋಪ ದೇಹ ನಿನ್ನದೇನಲೊ

## 5. ಪ್ರಥಮೇಶ್ರವಣಾಧಿಕರಣ

**ಸೂತ್ರ :**

**1. ಓಂ ಪ್ರಥಮೇ ಶ್ರವಣಾದಿತಿ ಚೇನ್ನ, ತಾ ಏವ
ಹ್ಯುಪಪತ್ತೇಃ ಓಂ** || ೫ ||

ಇದರಲ್ಲಿಯೂ ಭೂತಗಳಿಗೆ ಜೀವರಲ್ಲಿ ಕೂಡಿಕೊಂಡೇ ಗಮನ ಎಂಬುದನ್ನು ಸಾಧಿಸಿದ್ದಾರೆ.

**ದಾಸಸಾಹಿತ್ಯ :**

ಒಗೆತನದೊಳು ಸುಖವಿಲ್ಲ ಇದ । ಒಲ್ಲೆನೆಂದರೆ ನೀ ಬಿಡೆಯಲ್ಲ ॥ ಪ ॥
ಜಗದೊಳು ಪಗರಣ ಮಿಗಿಲಾಯಿತು ಪ । ನ್ನಗನಗನಗರನಿವಾಸ ॥ ಅ ॥

ಮೂರು ಬಣ್ಣಿಗೆಯ ಮನೆಗೆ ಮೂರೆರಡು ಭೂತಗಳು
ಮೂರು ಅವಸ್ಥೆಯು ದಿನಕೆ ಮೂರು ನೂರಾರು ಹತ್ತರಲಿ
ಮೂರು ವಿಧವಸ್ತದಿಂದ ಮೂರು ತಾಪಕ್ಕಾದೆ ॥ ೧ ॥

ಐದುಮಂದಿ ಭಾವನವರು ಐದು ಮೈದುನರು ಕೂಡಿ
ಐದು ಪರಿ ತಾನಾಗಿ ಮೂವನ್ನೈದು ಕತ್ತಲೆಕೋಣೆ
ಗೈದುವಂತೆ ಮಾಡುವರು ಐದು ಕಂದು ಬಿಚ್ಚಿಸುವರು
ಐದನೆ ಪೊಕ್ಕಸದ ಮನೆಯೆಲ್ಲಿದೆಯೋ ನಾಕಾಣೆ ॥ ೨ ॥

(ಶ್ರೀ ಗೋಪಾಲದಾಸರು)

## 6. ಅಶ್ರುತತ್ವಾಧಿಕರಣ

**ಸೂತ್ರ :**

**1. ಓಂ ಅಶ್ರುತತ್ವಾದಿತಿ ಚೇನ್ನ, ಇಷ್ಟಾದಿಕಾರಿಣಾಂ ಪ್ರತೀತೇಃ ಓಂ ॥ ೬ ॥**

ಇದರಲ್ಲಿಯೂ ಭೂತಗಳು ಎಲ್ಲಾ ಜೀವರ ಜೊತೆಗೆ ಹೋಗುವುದು ಎಂಬುದನ್ನು ಸ್ಥಿರಪಡಿಸಿರುತ್ತಾರೆ.

**ದಾಸಸಾಹಿತ್ಯ :**

ವಾರ್ತೆ ಕೀರ್ತಿ ಎಂಬುದೆರಡೇ ಬರುವುದಯ್ಯ ಸತ್ತಮೇಲೆ ವಸ್ತು ಪ್ರಾಣನಾಯಕ ಹೇಗೆ ದೊರಕಾನೂ । ಕತ್ತಲಾಗಿಸಲೆ ಆದಿಕೇಶವನ್ನು ಮುಟ್ಟಿ ಭಜಿಸೋ ॥

ಡಿಂಬದೊಳಗೆ ಇರುವ ಜೀವ ಕಂಬಸೂತ್ರಗೊಂಬೆಯಂತೆ ಎಂದಿಗಾದ್ದರೊಂದು ದಿನ ಸಾವು ತಪ್ಪದೋ ॥

(ಶ್ರೀ ಕನಕದಾಸರು)

## 7. ಭಾಕ್ತಾಧಿಕರಣ

**ಸೂತ್ರ :**

**1. ಓಂ ಭಾಕ್ತಂ ವಾಽನಾತ್ಮವಿತ್ತ್ವಾತ್ತಥಾಹಿ ದರ್ಶಯತಿ ಓಂ ॥ ೭ ॥**

ಮುಕ್ತಿಗೆ ಕೇವಲ ಅಮ ತಪ್ತಾಶನಾದಿ ಕರ್ಮ ಸಾಕೇ ಎಂದರ ಅಕಾಮ್ಯಕರ್ಮಿ. ಯಾಗಿ ಜಿಜ್ಞಾಸಾದಿ ಜ್ಞಾನಸಾಧನೆ ಮಾಡುವವನಿಗೆ ಮೋಕ್ಷವೇ ಹೊರತು ಜ್ಞಾನ॥ ರಾಹಿತ್ಯ ವಣಕರ್ಮಿಗಲ್ಲ. ಇಧಕ್ಕೆ ವೈರಾಗ್ಯಾದಿ ಸಾಧನೆ ಅತ್ಯಾವಶ್ಯಕ.

**ದಾಸಸಾಹಿತ್ಯ :**

ಭಕ್ತಿ ಬೇಕು ವಿರಕ್ತಿ ಬೇಕು ॥ ಪ ॥
ಶಕ್ತಿಬೇಕು ಮುಂದೆ । ಮುಕ್ತಿ ಬಯಸುವವಗೆ ॥ ಅ ॥
ಸತಿಯು ಅನುಕೂಲಬೇಕು । ಸುತನು ಸುಗುಣನಾಗಲಿಬೇಕು ॥
ಮತಿವಂತನಾಗಬೇಕು ಮಾತುಬಂದಿರಬೇಕು ॥ ೧ ॥

ಜಪದಿ ಜಾಣುವೆಯುಬೇಕು । ತಪದಿ ಬಲವಿರಬೇಕು ।
ಉಪವಾಸ ವ್ರತಬೇಕು । ಉಪಶಾಂತಿ ಇರಬೇಕು ॥ ೨ ॥
ಸಂಗವ ವರ್ಜಿಸಬೇಕು । ಅಂಗಶೋಧನೆ ಬೇಕು
ರಂಗವಿಠಲನ ಪಾದ । ಹಿಂಗದೇ ಭಜಿಸಬೇಕು ॥ ೩ ॥

## 8. ಕೃತಾತ್ಯಯಾಧಿಕರಣ

**ಸೂತ್ರ :**

**1. ಓಂ ಕೃತಾತ್ಯಯೇ ಅನುಶಯವಾನ್ ದೃಷ್ಟಸ್ಮೃತಿಭ್ಯಾಂಓಂ ॥ ೮ ॥**

ಕರ್ಮದಿಂದ ಸ್ವರ್ಗಾದಿ ಪ್ರಾಪ್ತಿ, ಕರ್ಮಾನುಭವ ನಂತರ ಮತ್ತೆ ಜನನ ಹೀಗೆ ಹತ್ತಾವರ್ತಿಯಾದರೂ ಕರ್ಮದಿಂದ ಸ್ವರ್ಗವೇ ಹೊರತು ಮೋಕ್ಷ ಪ್ರಾಪ್ತಿಗೆ ಜ್ಞಾನ ಭಕ್ತಿ, ವೈರಾಗ್ಯಾದಿಗಳು ಅತ್ಯಾವಶ್ಯಕ,

**ದಾಸಸಾಹಿತ್ಯ :**

ಕಾಲ ದೇಶ ವಿದ್ಯೆ ಕರ್ಮಜಾಲದಲ್ಲಿ ಎನ್ನ ಬಂಧಿಸಿ
ಲೀಲೆಮಾಡುವಿ ನೀನು ಸಿಗದೆಲೆ ಮೇಲು ನಿನ್ನ ಘನತೆಯು
ಮೂಲಕಾರಣ ಮುಖ್ಯ ನೀನೆಂದು ಶೀಲಬಲ್ಲವ ನಿನ್ನ ಬಿಡೆ-ಪರಿ
ಪಾಲಿಸುವುದು ಚಿತ ಗುರುಗೋಪಾಲವಿಠಲ ವೇಂಕಟ ॥
ಏನಯ್ಯ ಶ್ರೀಕೃಷ್ಣ ನಿನ್ನಾಧೀನ ತನದ ಘನತೆಯು , .

**(ಶ್ರೀ ಗುರುಗೋಪಾಲವಿಠಲರು)**

ತ್ರಿವಿಧ ಕರ್ಮಂಗಳು ನಿನ್ನಾಧೀನವಾಗಿ ॥ ಅನಂತಕಾಲದಲ್ಲಿ ಪರಬೋಮ್ಮಾದಿ-ಗಳು । ನಿನ್ನದಾಸರೆಂಬ ತಾರತಮ್ಯದಿಂದ । ಶ್ರವಣಮನನನಿಧಿಧ್ಯಾಸನಗಳನ್ನು ॥ ಮಾಡು ತಲಿರೋಗಮ ಸಂಚಿತಗಳ ಕಳೆದು । ಪ್ರಾರಬ್ಧಭೋಗವ ಅನುಭವಿಸಿದಲ್ಲದೆ

. . . . . . . . . ನಿನ್ನ ಪರಮಾನುಗ್ರಹ ಸ್ವರೂಪ ಸುಖವನ್ನು ವ್ಯಕ್ತ ಮಾಡುವಲ್ಲಿ ನೀ ಕಾರಣನಾದ ಕಾರಣ । ಈಪರಿಯಲ್ಲಿ ಕಡೆಗೈದಿಸುವೆ ಗುರುಪುರಂದರವಿಠಲ ಮುಕುತಿಪ್ರದ ನೀನು ॥

(ಶ್ರೀ ಗುರುಪುರಂದರವಿಠಲರು)

## 9. ಯಥೈತಾಧಿಕರಣ

**ಸೂತ್ರ :**

**1. ಓಂ ಯಥೇತಮನೇವಂ ಚ ಓಂ** ॥ ೯ ॥

ಒಳ್ಳೆ ಕರ್ಮಮಾಡಿದ ಜೀವ ಯಾವ ಮಾರ್ಗದಿಂದ ಸ್ವರ್ಗಕ್ಕೆ ಹೋಗಿರುತ್ತಾನೋ ಅದೇ ಮಾರ್ಗದಿಂದ ವಾಪಸ್ಸು ಒಂದು ಬಿಡುವುದರಿಂದ ಕರ್ಮದಲ್ಲಿ ವೈರಾಗ್ಯಾದಿಗಳು ಅತ್ಯಾವಶ್ಯಕ.

**ದಾಸಸಾಹಿತ್ಯ :**

ಸ್ವೋಚಿತ ಕರ್ಮಗಳಾಚರಿಸುತ ಒಲು । ನೀಚರಲ್ಲಿ ಪೋಗಿ ಯಾಚಿಸದೇ । ಖೇಚರವಾಹ ಚರಾಚರ ಬಂಧಕ ಮೋಚಕನ ಹುದೆಂದ್ಯೋಚಿಸುತ್ತಿಪ್ಪುದೇ॥ ಫಲವಿದು ಬಾಳ್ದುದಕೆ । ಸಿರಿ ನಿಲಯನ ಗುಣಗಳ ತಿಳಿದು ಭಜಿಸುವುದೇ ॥

## 10. ಚರಣಾಧಿಕರಣ

**ಸೂತ್ರಗಳು :**

**1. ಓಂ ಚರಣಾದಿತಿ ಚೇನ್ನ, ತದುಪಲಕ್ಷಣಾರ್ಥೇತಿ ಕಾರ್ಷ್ಣಾಜಿನಿಃ ಓಂ** ॥ ೧೦ ॥

**2. ಓಂ ಅನರ್ಥಕ್ಯಮಿತಿ ಚೇನ್ನ, ತದಪೇಕ್ಷತ್ವಾತ್ ಓಂ** ॥ ೧೧ ॥

**3. ಓಂ ಸುಕೃತದುಷ್ಕೃತೇ ಏವೇತಿ ತು ಬಾದರಿಃ ಓಂ** ॥ ೧೨ ॥

ಗಮನಾಗಮನಗಳು ಕರ್ಮಫಲವೆಂದು ಸಾಧಿಕವಾಗಿದೆ.

**ದಸಸಾಹಿತ್ಯ :**

ಜನರೊಳಗೆ ಸೇಸಿದ್ದು ಜನಮ ಜನುಮಗಳಲ್ಲಿ
ಗುಣಕಾಲಕ್ರಿಯಾ. ಸ್ವಭಾವಂಗಳನು ಸರಿಸಿ ಪುಣ್ಯಪಾಪವ
ಮಾಡಿಸಿ ಮುಕ್ತರನು ಮಾಳ್ಪಂಥ ಕರುಣಾಳು ಕೃಷ್ಣಾ
ನಿನ್ನ ಸಂಕಲ್ಪಾನುಸಾರ ಮಾಡೊ.

(ಶ್ರೀ ಜಗನ್ನಾಥದಾಸರು)

## 11. ಅನಿಷ್ಟಾಧಿಕರಣ

**ಸೂತ್ರಗಳು :**

**1. ಓಂ ಅನಿಷ್ಟಾದಿ ಕಾರಿಣಾಮಪಿ ಚ ಶ್ರುತಂ ಓಂ** || ೧೩ ||

**2. ಓಂ ಸಂಯಮನೇ ತ್ವನುಭೂಯೇತರೇಷಾಮಾ**
**ರೋಹಾವರೋಹೌ ತದ್ಗತಿದರ್ಶನಾತ್ ಓಂ** || ೧೪ ||

**3. ಓಂ ಸ್ಮರಂತಿ ಚ ಓಂ** || ೧೫ ||

ಯಜ್ಞಯಾಗಾದಿ ಉತ್ತಮ ಕರ್ಮಾನುಷ್ಠಾನ ಮಾಡಿದವರಿಗೇನೇ ಗಮನಾ-ಗಮನಗಳು ಹಾಗೂ ಉತ್ತಮಫಲ. ಪುಣ್ಯಕರ್ಮಗಳನ್ನು ಮಾಡದವನು ನರಕಾದಿ ಅನರ್ಥಫಲವನ್ನು ಹೊಂದುವನು

**ದಾಸಸಾಹಿತ್ಯ :**

1. ಏನು ಮಾಡುವ ಕರ್ಮ ನೀನೇ ಮಾಡೋಹೆಂಬ। ಜ್ಞಾನವೇಯೆನಗೆ ನಿಜವಾಗಿ। ನಿಜವಾಗಿ ಪುತ್ತೇನೂ । ನಾನೊಲ್ಲೆ ನಿನ್ನಾಣೆ.

**(ತತ್ವಸುವಾಲಿ-ಶ್ರೀ ಜಗನ್ನಾಥದಾಸರು)**

2, ಮಾಡು ದಾನ ಧರ್ಮ ಪರೋಪಕಾರವ ಮರೆಯದಿರಚ್ಚರಿಕೆ.

**(ಶ್ರೀ ಪುರಂದರದಾಸರು)**

3. ಹೀನ ಸತ್ಕರ್ಮಗಳೆರಡು ಪವ
ಮಾನ ದೇವನು ಮಾಳ್ವನಿದಕನು
ಮಾನವಿಲ್ಲೆಂದೆನುತ ಧೃಡ ಭಕ್ತಿಯಲಿ ಭಜಿಪರ್ಗೆ ।
ಪ್ರಾಣ ಪತಿ ಸಂಪ್ರೀತನಾಗಿ ಕು
ಯೋನಿಗಳ ಕೊಡನಲ್ಲ ಕರ್ಮಗ
ಳಾನೆ ಮಾಡುವೆನೆಂಬ ಮನುಜನ ನರಕವೈದಿಸುವ ॥

**(ಹರಿಕಥಾಮೃತಸಾರ)**

## 12. ಅಪಿಸಪ್ತಾಧಿಕರಣ

**ಸೂತ್ರ :**

**1. ಓಂ ಅಪಿ ಸಪ್ತ ಓಂ** || ೧೬ ||

ಭಗವದ್ವೇಷಿಗಳಿಗೆ ಘೋರತರವಾದ ಏಳು ನರಕಗಳಿವೆ.

ದಾಸಸಾಹಿತ್ಯ :

1. ಹರಿ ದ್ವೇಷಿಗೆ ನರಕ ತಪ್ಪದೆಂದೆಂದೂ . . . .

(ಶ್ರೀ ಕನಕದಾಸರು)

2. ಜ್ಞಾನಬಲ ಸುಖ ಪೂರ್ಣ ವ್ಯಾಪ್ತಗೆ
ಹೀನಗುಣ ಪೇಳುವವನೀಶ್ವರ
ನಾನೆಯೆಂಬುವ ಸಚ್ಚಿದಾನಂದಾತ್ಮಗುತ್ಪತ್ತಿ
ತೇನತಂಬಿನಿಗೀಶಗೆ ಏಯೋ
ಗಾನು ಚಿಂತನೆ ಭೇದ ಭೇದ ವಿ
ಹೀನ ದೇಹಗೆ ಶಸ್ತ್ರಗಳ ಭಯ ಪೇಳುವವ ದೃಷ್ಟ ॥

(ದ್ವೈತತಾರತಮ್ಯಸಂಧಿ-ಹರಿಕಥಾಮೃತಸಾರ)

## 13. ಶತ್ರ್ವಾಷ್ಯಧಿಕರಣ

ಸೂತ್ರ :

**1. ಓಂ ತತ್ರಾಪಿ ಚ ತದ್ವ್ಯಾಪಾರಾದವಿರೋಧಃ ಓಂ ॥ ೧೭ ॥**

ನರಕವು ದುಃಖ ಸ್ವರೂಪವೇ "ನಾಸೌದುಃಖಭುಕ್" ಇತ್ಯಾದಿ ಶ್ರುತಿಯಂತೆ ಶ್ರೀಹರಿಗೆ ದುಃಖಾಭಾವ ಇರೋಣದರಿಂದ ನರಕವಾಸಿಗಳಿಗೆ ದುಃಖಾನುಭವ ಕೊಡುತ್ತಾನೆಯೇ ವಿನಹ ಅವನಿಗೆ ದುಃಖ ಲೇಶವಿಲ್ಲ.

ದಾಸಸಾಹಿತ್ಯ :

ಕಾದ ಕಬ್ಬಿಣ ಓಡಿದು ಬಡಿಯಲು
ವೇದನವು ಲೋಹಗಳಿಗಲ್ಲದ
ಲಾದು ದೇಸ್ವ್ಯಯನಳಗಾ ವ್ಯಥಯೇನ ಮಾಡಿದ ।
ಆದಿದೇವನು ಸರ್ವಜೀವರ
ಕಾದು ಕೊಂಡಿಹನೊಳ ಪೊರಗದುಃ
ಖಾದಿಗಳು ಸಂಬಂಧವಾಗುವವೇನೋ ಚಿನ್ಮಯಗೆ ॥

## 14. ವಿದ್ಯಾಧಿಕರಣ

ಸೂತ್ರ :

**1. ಓಂ ವಿದ್ಯಾಕರ್ಮಣೋರಿತಿ ತು ಪ್ರಕೃತತ್ವಾತ್ ಓಂ ॥ ೧೮ ॥**

ಮುಖ್ಯ ತಾತ್ಪರ್ಯ ಜೀವನಿಗೆ ಸಾಧನ ಮಾಡುವುದರಲ್ಲಿ ಸ್ವಾತಂತ್ರ್ಯ ಇದ್ದರೂ (ಅಂದರೆ ದತ್ತ ಸ್ವಾತಂತ್ರ) ಫಲದಲ್ಲಿ ಏನೇನೂ ಸ್ವಾತಂತ್ರ್ಯವಿಲ್ಲ.

ದಾಸಸಾಹಿತ್ಯ :

1. ದೀಪ ಕರದಲಿ ಪಿಡಿದು ಕಾಣದೆ
ಕೂಪದಲಿ ಬಿದ್ದಂತೆ ವೇದ ಮ
ಹೋಪನಿಷದರ್ಥಗಳ ನಿತ್ಯದಲಿ ಪೇಳುವವರೆಲ್ಲಾ ।
ಶ್ರೀಪವನ ಮುಖವಿನುತನಮಲ ಸು
ರೂಪಗಳ ವ್ಯಾಪಾರ ತಿಳಿಯದೆ
ಪಾಪ ಪುಣ್ಯಕೆ ಜೀವ ಕರ್ತೃವ ಕರ್ತೃ ಹರಿಯೆಂಬ ॥

(ಹರಿಕಥಾಮೃತಸಾರ)

2. ನಿನ್ನ ಸ್ವಾತಂತ್ರ್ಯವ ಒಲ್ಲೆನೆಂದರೆ ಬಿಡದೊ । ನಾನೆ ನಿನ್ನವನಯ್ಯ ವಿಜಯವಿಠಲರೇಯ ॥

(ಶ್ರೀ ವಿಜಯವಿಠಲ)

## 15. ನ ತೃತೀಯಾಧಿಕರಣ

ಸೂತ್ರ :

1. ಓಂ ನ ತೃತೀಯೇ, ತಥೋಪಲಬ್ಧೇಃ ಓಂ ॥ ೧೯ ॥
2. ಓಂ ಸ್ಮರ್ಯತೇ ಽಪಿ ಚ ಲೋಕೇ ಓಂ ॥ ೨೦ ॥
3. ಓಂ ದರ್ಶನಾಚ್ಚ ಓಂ ॥ ೨೧ ॥
4. ಓಂ ತೃತೀಯೇ ಶಬ್ದಾವರೋಧಃ ಸಂಶೋಕಜಸ್ಯ ಓಂ ॥ ೨೨ ॥
5. ಓಂ ಸ್ಮರಣಾಚ್ಚ ಓಂ ॥ ೨೩ ॥

ಅಂಧಂತಮಸ್ಸಿನಲ್ಲಿ ಸುಖಲೇಶ ಇಲ್ಲ, ಅಂಧತಮಸ್ಸಿನ ದುಃಖ ವಿಸ್ತರಿಸಿದರೆ ಅದನ್ನು ಕೇಳಿದ ಮಾತ್ರಕ್ಕೇನೇ ಮೂರ್ಛೆ ಹೋಗುವ ಸ್ಥಿತಿಯುಂಟು.

ದಾಸಸಾಹಿತ್ಯ :

ತಮಸು ಸಾತ್ವಿಕ ಕರೆನಿಸಿಕೊಂಬರು
ಅಮಿತ ನಾಖಾತ್ಯ ಸುರ ಗಣವುರೆ
ತಮಸ ರಾಜಸವೆನಿಸಿಕೊಂಬುದು ದೈತ್ಯಸಮುದಾಯ
ತಮಸು ತಾಮಸ ಕಲಿಪುರಂಧ್ರಿಯು
ಅಮಿತ ದುರ್ಗುಣ ಪೂರ್ಣ ಸರ್ವಾ
ಧರ್ಮರೊಳಧಮಾಧಮ ದುರಾತ್ಮನು ಕಲಿಯೆನಿಸಿಕೊಂಬ ॥

(ಹರಿಕಥಾಮೃತಸಾರ)

ಘೋರ ನರಕದಲ್ಲಿ ಬಿದ್ದು ಅಪಾರ ಜನರು ಚೀರುತಿರಲು ಉದ್ಧಾರ ಮಾಡಿದ ನಾರದಾರಿವರು. . . .

(ಶ್ರೀ ವಿಜಯದಾಸರು)

## 16. ತತ್ಸ್ವಭಾವಾಧಿಕರಣ

**ಸೂತ್ರ :**

**1. ಓಂ ತತ್ಸ್ವಾಭಾವ್ಯಾಪತ್ತಿರುಪಪತ್ತೇಃ ಓಂ || ೨೪ ||**

ಇಲ್ಲಿ ಕರ್ಮಿಗಳಿಗೆ ಧೂಮಾದಿದೇವತಾ ಭಾವ ಪ್ರಾಪ್ತಿ ನಿವಾರಿಸಲ್ಪಟ್ಟಿದೆ. ಒಬ್ಬ ಇನ್ನೊಬ್ಬನಲ್ಲಿ ಪರಿಪೂರ್ಣಗೊಂಡರ ಅವರು ಭಿನ್ನರೇ ಆದ್ದರಿಂದ ದೇವತೈಕ್ಯವು ಕೂಡುವುದಿಲ್ಲ. ಅನೇಕರು ಒಂದು ಪದವಿ ಏಕಕಾಲದಲ್ಲಿ ಹೊಂದಲಾಗದು. ಅದು ದೇವತಾಸಾದೃಶ್ಯ ಪರ ಅಥವಾ ಆ ಲೋಕ ಪ್ರವೇಶದಿಂದ ಸ್ವಾಸ್ಥ್ಯ ಪರ ಆಯಿತು. ಸರ್ವಥಾ ದೇವತೈಕ್ಯವು ಪರವಲ್ಲ.

**ದಾಸಸಾಹಿತ್ಯ :**

ನಾನು ನೀನು ಎನ್ನದಿರು ಹೀನ ಮಾನವ
ಜ್ಞಾನದಿಂದ ನಿನ್ನ ನೀನೆ ತಿಳಿದು ನೋಡೆಲೊ.

(ಶ್ರೀ ಕನಕದಾಸರು)

## 17. ನಾತಿಚಿರೇಣಾಧಿಕರಣ

**ಸೂತ್ರ :**

**1. ಓಂ ನಾತಿಚಿರೇಣ, ವಿಶೇಷಾತ್ ಓಂ || ೨೫ ||**

ಜೀವನಾದವನಿಗೆ ಸ್ವರ್ಗದಿಂದ ಶೀಘ್ರವಾಗಿಯೇ ಮಾತೃಗರ್ಭ ಮೂಲಕ ಭೂಲೋಕವಾಸವನು ಹೇಳುತ್ತಾರೆ. ಏಕೆಂದರೆ ಅವನಿಗೆ ಅಲ್ಲಿರಲು ಸ್ವತಂತ್ರವಿಲ್ಲ.

**ದಾಸಸಾಹಿತ್ಯ :**

ಲೇಸಕಾಣೆನು ಜನನ ಮರಣದಿ
ಘಾಸಿಯಾದೆನು ನೊಂದೆ ನಕಟಾ
ಲೇಸನು ನೋಡಲು ಪರಾತ್ಪರವಸ್ತು ನೀನಾಗಿ ॥
ಶ್ರೀ ಸಲಹುವವನಲ್ಲವೇ ಕರು
ಣಾ ಸಮುದ್ರನು ನೀನಿರಲು
ಕಮಲಾಸನವ ಹಂಗೇಕೆ ರಕ್ಷಿಸು ನಮ್ಮನನವರತ ॥

(ಹರಿಭಕ್ತಿಸಾರ ಶ್ರೀ ಕನಕದಾಸರು)

2) ಎಲ್ಲಿಂದ ಬಂದೆ ಮುಂದೆತ್ತ ಪಯಣ

(ಶ್ರೀ ಕನಕದಾಸರು)

## 18. ಅನ್ಯಾಧಿಕರಣ

**ಸೂತ್ರ :-**

**1. ಓಂ ಅನ್ಯಾಧಿಷ್ಠಿತೇಪೂರ್ವವದಭಿಲಾಪಾತ್ ಓಂ** || ೨೬ ||

**2. ಓಂ ಅಶುದ್ಧಮಿತಿ ಚೇನ್ನ, ಶಬ್ದಾತ್ ಓಂ** || ೨೭ ||

ಸ್ವರ್ಗದಿಂದ ಭೂಮಿಗಿಳಿದ ಜೀವನಿಗೆ ವ್ರಿಹ್ಯಾದಿ ಮೂಲಕ ಪಿತೃ ಮಾತೃದೇಹ ಪ್ರವೇಶಮಾತ್ರ ಅಭಿಮಾನವಿರುವುದಿಲ್ಲ, ಯಜ್ಞಾದಿಕರ್ಮಗಳಲ್ಲಿ ಮಾಡುವ ಪಶುಹಿಂಸೆ ಹಿಂಸೆಯಲ್ಲ.

**ದಾಸಸಾಹಿತ್ಯ :-**

ಎತ್ತಿದೆನೊ ನಾನಾಶರೀರವ
ಹೊತ್ತು ಹೊತ್ತಲಸಿದೆನು ಸಲಿಪೇ
ಸತ್ತು ನಿನ್ನಯ ಪದವ ಕಾಣದೆ ತೊಳಲಿ ಬಳಲಿದೆನು ||
ಸತ್ತು ಹುಟ್ಟುವ ಹುಟ್ಟಿ ಹಿಂಗುವ
ಸುತ್ತು ತೊಡಕನು ಪರಿಣಿಸಲಿ ಪುರು
ಷೋತ್ತಮನೆ ಮನವೊಲಿದು ರಕ್ಷಿಸು ನಮ್ಮನನವರತ ||

## 19. ರೇತೋಧಿಕರಣ

**ಸೂತ್ರ :-**

**1. ಓಂ ರೇತಸ್ಸಿಗ್ಯೋಗೋ ಥ ಓಂ** || ೨೮ |

ಸ್ವರ್ಗದಿಂದ ಇಳಿಯುವ ಜೀವಿಗೆ ಮೊದಲು ರೇತಸನ್ನು ಸೇಚನೆ ಮಾಡತಕ್ಕ ತಂದೆಯಲ್ಲಿ ಪ್ರವೇಶನಂತರ ತಾಯಿಯಲ್ಲಿ ಪ್ರವೇಶ.

**ದಾಸಸಾಹಿತ್ಯ :-**

ಸತಿ ಪುರುಷರೇ ಕೂಡಿ ತಂತಮ್ಮ ಕಾಮಕ್ಕೆ
ಸಲುವಾಗಿ ಕೂಡಲು ಶುಕ್ಲ ರಕ್ತ
ಮಿಳಿತವಾದ ಪಿಂಡಪೂರ್ವದ ಗತಿಯಿಂದ
ನೆಲಕೆ ಬೀಳಲು ಅದು ಸಲಹಿ ರಕ್ಷಿಪುದೆ
ಸುತನಿಂದ ಗತಿಯುಂಟೇ ಜಗದೊಳು . . . .

(ಶ್ರೀ ಕನಕದಾಸರು)

## 20. ಓಂ ಯೋನ್ಯಧಿಕರಣ

ಸದತ್ರ: -

1. ಓಂ ಯೋನೇಃ ಶರೀರಂ ಓಂ || ೨೯ ||

ಜೀವಿಯು ಪಿತೃದ್ವಾರ ಮಾತೃಗರ್ಭವನ್ನು ಪ್ರವೇಶಿಸಿ ನಂತರ ಜನಿಸುವನು. ಆದರೆ ಈ ಕ್ರಮ ಮಹಾತ್ಮರಿಗಿಲ್ಲ.

ದಾಸಸಾಹಿತ್ಯ :-

ಒಂದು ಕ್ಷಣ ಪಾಯು ಬರೆ ಮರ್ಗಂಧ ಹೇಸುವುದ
ತಂತಯೊಡಲೊಳ್ ಮೂರು ಮಾಸ ತಾಯುದರದಲ್ಲಿ
ನಿಂದು ನವ ಮಾಸಂಗಳಲಿ
ಒಂದಾಗಿ ಮಲಮೂತ್ರದಲಿ ಕುದಿದು ಕುದಿದು
ಒಂದೆ ಎಂಬತ್ತನಾಲ್ಕು ಲಕ್ಷ ಯೋನಿಗಳಲ್ಲಿ
ನೊಂದೆ ಮುಸ್ಸೂರ ಅರವತ್ತು ಬೇನೆಗಳಿಂದ
ಒಂದು ಕ್ಷಣವೂ ಯಮನ ಭಾದೆ ತಾಳಲಾರೆ
ಹಿಡಿಟ್ಟುಕೋ ಮುರಾರಿ
ಮುಂದೆ ದಯವಿರಲಿ ಶ್ರೀಹರಿಯೆ.

(ಶ್ರೀ ಕನಕದಾಸರು)

—೦—೦—೦—

## ತೃತೀಯಾಧ್ಯಾಯ – ದ್ವಿತೀಯ ಪಾದ

### 1. ಸಂಧ್ಯಾಧಿಕರಣ

ಸೂತ್ರಗಳು :-

1. ಓಂ ಸಂಧ್ಯೇ ಸೃಷ್ಟಿರಾಹ ಹಿ ಓಂ || ೧ ||
2. ಓಂ ನಿರ್ಮಾತಾರಂ ಚೈಕೇ, ಪುತ್ರಾದಯಶ್ಚ ಓಂ || ೨ ||
3. ಓಂ ಮಾಯಾಮಾತ್ರಂ ತು ಕಾರ್ತ್ಸ್ನ್ಯೇನಾನಭಿ-
ವ್ಯಕ್ತ ಸ್ವರೂಪತ್ವಾತ್ ಓಂ || ೩ ||
4. ಓಂ ಸೂಚಕಶ್ಚ, ಹಿ ಶ್ರುತೇರಾಚಕ್ಷತೇ ಚ ತದ್ವಿದಃ ಓಂ || ೪ ||

ಸ್ವಾಪ್ನ ಪದಾರ್ಥಗಳು ಸತ್ಯವಾದದ್ದು. ಅದವು ಭಗವಂತನಿಂದಲೇ ನಿರ್ಮಿಸಲ್ಪಡುವವು. ಜಾಗ್ರತ, ಸುಷುಪ್ತಿ ಹಾಗೂ ಸ್ವಪ್ನಾದಿಗಳು ಶ್ರೀಹರಿಯಿಂದಲೇ ಸೃಷ್ಟಿಯಾಗುವುವು "ನ ತತ್ರಾ" ಇತ್ಯಾದಿ ಶ್ರುತಿಯಂತೆ, ಶ್ರೀಹರಿ ಉಪಾದಾನವಿಲ್ಲದೇ ಸಂಸ್ಕಾರಗಳನ್ನೇ ಉಪಾದಾನವನ್ನಾಗಿ ಇಟ್ಟುಕೊಂಡು ಸ್ವಪ್ನ ಸೃಷ್ಟಿಸುತ್ತಾನೆ. ಸ್ವಪ್ನಾದಿಗಳು ಶುಭ ಶುಭ ಸೂಚಿಕವಾದದ್ದು ಅಸತ್ಯವಲ್ಲ, ಎಲ್ಲಾ ಶ್ರೀಹರಿಯಿಂದಲೇ

ದಾಸಸಾಹಿತ್ಯ :-

ವಿಶ್ವ ತೇಜಸ ಪ್ರಾಜ್ಞ ತುರ್ಯಾತ್ಮಾ ಅಂತರಾತ್ಮನು । ಪರಮಾತ್ಮ ಜ್ಞಾನಾತ್ಮ ।

ವಿಶ್ವತೋಮುಖಿ ಗುಣ ಗಣ ಭೂಷಣನು, ಸಂಗತ ಸುಖನು । ಸಂನ್ಯಾಸಿ-

ಸಾಧನಭೂಷಣನು ।

ವಿಶ್ವ ನಾಟಕ ಋಗ್ಯಜುಸ್ಸಾಮ ಆಗಸ್ತ್ಯೋಕ್ತನು । ಪ್ರತಿಪಾದ್ಯ ತ್ರಿಸಾಮನು ।

ವಿಶ್ವಾಸದಲಿ ತವನಾಮ ಭಜನೆಯ ಕಾಮನು । ಪುನಃ ಯೋಗ ಶ್ರೀರಾಮನು ॥

(ಶ್ರೀಗುರುಗೋಪಾಲವಿಠಲರು)

## 2. ಪರಾಭಿಧ್ಯಾನಾಧಿಕರಣ

ಸೂತ್ರ :-

**1. ಓಂ ಪರಾಭಿಧ್ಯಾನಾತ್ತು ತಿರೋಹಿತಂ, ತತೋ ಹ್ಯಸ್ಯ ಬಂಧ ವಿಪರ್ಯಯೌ ಓಂ ॥ ೫ ॥**

ಜ್ಞಾನಾಜ್ಞಾನಗಳು ಜಡ ಪದಾರ್ಥ ಇವುಗಳ್ನು ಕೊಡುವವನು ಶ್ರೀಹರಿಯೇ ಆದ್ದರಿಂದ ಸ್ವಪ್ನವು ರೋಹಿತವಾಗುವುದೂ ಶ್ರೀಹರಿಯಿಂದಲೇ.

1. "ಬಂಧಕೋಭವ ಪಾಶೇನ" ಹಾಗೂ "ಸ್ವಪ್ನಾದಿ ಬುದ್ಧಿ ಕರ್ತಾ ಚ ಇತ್ಯಾದಿ ಶ್ರುತಿರೀತ್ಯ

ದಾಸಸಾಹಿತ್ಯ :-

1. ಕನಸಿಲಿ ಗಜ, ತುರುಗ, ಮನೆ, ಸತಿ, ಸುತ, ಮಾರ । ಧನ ಭೂಗೋ ಕ್ಷೇತ್ರ, ವಸ, ಕಾಂಚನ, ವಸ್ತ್ರ, ಮಣಿ, ಆಂದಣ, ದೇಶ । ಜನನಾಡ ಸಾಂದ್ರ ಜನನಿ ಜನಕ ಬಂಧು । ತೃಣ ಪಶು ಮೊದಲಾಗಿ ಅಣು ಘನ ಗುರುಲಘು । ಅನಿತನಿತ್ಯ ಎಲ್ಲಾ ಎಣಿಕೆ ಇಲ್ಲದೇಯೂ । ಬನೆ ಮಾಡದ ಕಾಂಬ ಜನನ ಸ್ಥಿತಿ ನಾಶ । ಗುಣ ದುರ್ಗುಣ ಪೂರ್ತಿ ಕ್ಷಣ ಕ್ಷಣಕೆ ಬಿಡದೆ । ತನುವಿನೊಳಗ ಸ್ವಪ್ನಕಾಲದಲ್ಲಿ ಜೀವನು । ಭಿನ್ನವಾದ ಜನ ಜಡ ಚೇತನರ ದಿನ ರಾತ್ರಿಯಿಂದು । ಗಣನೆಮಾಡುವ ಇದಕ ನೆನಸಿ

ಪ್ರತ್ಯಕ್ಷದಲಿ । ಪ್ರಣಪ ಮೂರುತಿ ನಮ್ಮ ವಿಜಯ ವಿಠಲರೇಯ । ಅನಿಮಿಷರೊಡನೆ ಜನುಮ ಜನುಮದಲಿ ಇದ್ದು । ಅನುಭವ ಮಾಡಿಸುವ

(ಶ್ರೀ ವಿಜಯದಾಸರ-ಸ್ವಪ್ನ ಸುಳಾದಿ)

## 3. ದೇಹಯೋಗಾಧಿಕರಣ

**ಸೂತ್ರ :**

**1. ಓಂ ದೇಹಯೋಗದ್ವಾಸೋ ಅಪಿ ಓಂ** || ೬ ||

ಜಾಗ್ರತಾವಸ್ಥೆಯೂ ಕೂಡ ಈಶ್ವರ ಇಚ್ಛೆಯಿಂದಲೇ ಹೊರತು ಕಾಲಾದಿ-ಗಳಿಂದಲ್ಲಾ "ಸ ಏವ ಜಾಗರೀತೇ ಸ್ವಾಪಯತಿ" ಇತ್ಯಾದಿ ಶ್ರುತಿರೀತ್ಯ ಕಾಲ ನಿಮಿತ್ತ ಕಾರಣಮಾತ್ರಾ ಆದರೆ ಕರ್ತ ಶ್ರೀಹರಿ.

**ದಾಸಸಾಹಿತ್ಯ :–**

ಸ್ವಪ್ನಪ್ರಕರಣ ಯೋಚಿಸಿ ತಿಳಿಯಬೇಕು । ಗುಪಿತಹಾಗಿದೆ ಇದು ನೋಡು । . . . . . . . . . . ಟ್ಟ ವೃತವಾದ ಮನಸ್ಸು ಆಶ್ರಯ ವೇಣಿ ಜಡ । ತ್ರಿ ವರಿ ಗುಣ ಸಂಯುಕ್ತ ಆಕಾರವೋ । ಚಪಲ ಮನ ..ದ್ರ ರವಾಗಿ ಹೃದಯ ಕಂಠ ನಯನ । ಜಪಿಸೋ ಪೂರ್ವೋಕ್ತ ಕ್ರಮ ಕರಣ ಭೇದ । ತಪನಕಾಲ ಪ್ರಾರಂಭ ಬಹಿರ ವ್ಯಾಪಾರವೆ । ನಿಪುಣ ಜಾಗ್ರತಾವಸ್ಥೆ ಎಂಭೊ ನಾಮ । ಕೃಪಣ ವತ್ಸಲ ವಿಶ್ವ ಪ್ರಾಜ್ಞ ಚಕ್ಷುಸ್ಥಾ ।ನೀ ಪತ್ರೀಣ ಮೂರು ಬಿನ್ನಿ ಯತ್ನದನ । ಕೃಪಾವಯೋನಿಧಿ ಸ್ಥೂಲ-ಭುಕು ಸತ್ವ ಪ್ರವರ್ತಕ । ತಪಸೀಯ ಕಾಯ । ಅತನೇ ವಿಷ್ಣುವೋ . . . . .

(ಸ್ವಪ್ನಸುಳಾದಿ-ಶ್ರೀ ವಿಜಯದಾಸರು)

## 4. ತದಭಾವಾಧಿಕರಣ

**ಸೂತ್ರ :-**

**1. ಓಂ ತದಭಾವೋ ನಾಡೀಷು ತಚ್ಛ್ರು**
**ತೇರಾತ್ಮನಿ ಚ ಓಂ** || ೭ ||

ಸತ್ಯ ಸದೋಽಪನಾದ, ಶ್ರುತಿ ಪ್ರತಿಪಾದ್ಯನಾದ, ನಾಡಿಸ್ಥ ಪರಮಾತ್ಮನಲ್ಲಿಯೆ ಸುಷುಪ್ತಿಯು ಎಂಬುದೇ ಸಿದ್ಧಾಂತ.

**ದಾಸಸಾಹಿತ್ಯ :–**

ಇಂದ್ರಿಯೋನಿಯ ಮಧ್ಯ ಇಸಿತು ವ್ಯಾಪಾರ ಸುಖಿ ।
ಸಾಂದ್ರ ಪಿಡಿಯ ವಿಠಲ ಮಾಡುವ ಬಲು ಲೀಲ ॥

(ಸುಳಾದಿ ಶ್ರೀವಿಜಯದಾಸರು)

## 5. ಪ್ರಭೋದಾಧಿಕರಣ

**ಸೂತ್ರ :-**

**1. ಓಂ ಅತಃ ಪ್ರಬೋಧೋ ಅಸ್ಮಾತ್ ಓಂ** || ೮ ||

ಜೀವನು ಆತ್ಮನಲ್ಲಿ ಸುಪ್ತನಾದ ಕಾರಣ, ಸುಪ್ತಿ ಪ್ರಭೋಧವು ಆ ಪರಮಾತ್ಮ ನಿಂದಲೇ ಆಗುತ್ತಲಿದೆ

**ದಾಸಸಾಹಿತ್ಯ :-**

ಲೇಶ ಸ್ವಾತಂತ್ರಿಯ ಗುಣವನು ಪ್ರ
ವೇಶ ವೈಸಿದ ಕಾರಣದಿ ಗುಣ
ದೋಷಗಳು ತೋರುವುವು ಸತ್ವಾಸತ್ವ ಜೀವರೊಳು ।
ಶ್ವಾಸ ಭೋಜನ ಪಾನ ಶಯನ ವಿ
ಲಾಸ ಮೈಥುನ ಗಮನ ಹರ್ಷ
ಕ್ಲೇಶ ಸ್ವಪ್ನ ಸುಪುಪ್ತಿ ಜಾಗ್ರತೆಯಹುದು ಚೇತನಕೆ ॥

**(ಹರಿಕಥಾಮೃತಸಾರ)**

## 6. ಕರ್ಮಾನುಸ್ಮೃತ್ಯಧಿಕರಣ

**ಸೂತ್ರ :-**

**1. ಓಂ ಸ ಏವ ಚ ಕರ್ಮಾನುಸ್ಮೃತಿಶಬ್ದವಿಧಿಭ್ಯಃ ಓಂ** || ೯ ||

ಶ್ರೀ ವಿಷ್ಣುವೇ ಸರ್ವಕಾಲೀನ ಸರ್ವಾವಸ್ಥ ಪ್ರೇರಕ. ಅವನೇ ಸರ್ವೋತ್ತಮ ಪುರುಷ ಶಬ್ದವಾಚ್ಯ ಅನ್ಯರಿಲ್ಲ.

**ದಾಸಸಾಹಿತ್ಯ :-**

1. ಮುಖ್ಯ ಕಾರಣ ವಿಷ್ಣು ಸ್ವತಂತ್ರನೇ ಸತ್ಯ || ಪ ||
ಸಖ್ಯರ ಪೋಷ ಸಿರಿ ಅಜಭವಾದಿ ಅವರೇಶ || ಅ ||

2. ಸ್ವಾತಂತ್ರಾ ಸ್ವಾತಂತ್ರ್ಯವೆಂಬುದನು ವಿವೇಕದಿ ತಿಳಿದು
ಸ್ವಾತಂತ್ರ್ಯ ಮುಖ್ಯನು ಹರಿಯೆಂದು ಧ್ಯಾನಕ್ಕೆ ತಂದು ।
ಸ್ವಾತಂತ್ರ ನಾನಲ್ಲವೊ ಎಂದು ಆಪ್ತನು ನೀನೆಂದು
ವ್ಯಾಪ್ತದರ್ಶಿಯಾಗೋ ತನಕ, ಹೇ ಪ್ರಾಣಿ ನಿನ್ನ
ಬ್ರಾಂತಿ ಬಿಡದೊ ಭಾಗ್ಯ ಪುರುಷನೆ.

**(ಶ್ರೀ ಗೋಪಾಲದಾಸರು)**

## 7. ಸಂಪತ್ಯಧಿಕರಣ

ಸೂತ್ರ :–

1. ಓಂ ಮುಗ್ಧೇ ಅರ್ಧಸಂಪತ್ತಿಃ ಪರಿಶೇಷಾತ್ ಓಂ || ೧೦ ||

ಮೋಹಾವಸ್ಥೆಯಲ್ಲಿ ಜೀವನಿಗೆ ವಿಷ್ಣುವಿನಲ್ಲಿ ಅರ್ಧ ಪ್ರವೇಶ. ಮೋಹ ಈಶ್ವರನಿಂದಲೇ ಆಗುತ್ತದೆ.

ದಾಸಸಾಹಿತ್ಯ :–

ಪಾಪಾಟವಿಗೆ ದಾವಾನಲ । ಕಾಪುರುಷರಿಗೆ ಕಾಲಾಂಬುದ
ಮೋಹಾಂಬುದಕೆ ಝುಂಝಾನಿಲ । ಕೋಪಾನಿಲಕೆ ಭುಜಂಗವು
ಸಿರಿ ಕೃಷ್ಣನ ಪಾದಸೇವೆ । ಭವ ಭುಜಂಗಕೆ ಗರುಡ.

(ಶ್ರೀವ್ಯಾಸರಾಯರು)

## 8. ಓಂ ನ ಸ್ಥಾನತೋಽಪ್ಯಧಿಕರಣ

ಸೂತ್ರಗಳು :–

1. ಓಂ ನ ಸ್ಥಾನತೋ ಅಪಿ ಪರಸ್ಯೋಭಯ ಲಿಂಗಂ ಸರ್ವತ್ರ ಹಿ ಓಂ || ೧೧ ||

2. ಓಂ ನ ಭೇದಾದಿತಿ ಚೇನ್ನ, ಪ್ರತ್ಯೇಕ ಮತದ್ವಚನಾತ್ ಓಂ || ೧೨ ||

3. ಓಂ ಅಪಿ ಚೈವಮೇಕೇ ಓಂ || ೧೩ ||

ಶ್ರೀಹರಿಯು ಸರ್ವರೂಪದಲ್ಲೂ ಸಿದ್ಧರ್ಗತಿ, ಅಶೇಷ ಗುಣಪೂರ್ಣ, ಸರ್ವೋತ್ತಮ. ಎಂದು ಸಾಧಿತವಾಗಿದೆ.

ದಾಸಸಾಹಿತ್ಯ :–

ಸರ್ವನಾಯಕ, ಸರ್ವಚೇಷ್ಟಕ, ಸರ್ವೇಶ.
ಸರ್ವಮಂಗಳ, ಸರ್ವಸಾರ ಭೋಕ್ತ,
ಸರ್ವಾಧಾರಕ ಸರ್ವಗುಣಗಣ ಪರಿಪೂರ್ಣ
ಸರ್ವಮೂಲಾಧಾರ ಕಲ್ಕಿ ಮೂರುತಿ ಎಂದು
ಕೂಗೆಲೊ ಮನುಜ ಕೂಗೆಲೋ
ಸಾಗರ ಶಯನನೇ ಜಗಕೆ ದೈವವೆಂದು

(ಶ್ರೀ ವಿಜಯದಾಸರು)

## 9. ಅರೂಪಾಧಿಕರಣ

**ಸೂತ್ರಗಳು :**

**1. ಓಂ ಅರೂಪವದೇವ ಹಿ ತತ್ಪ್ರಧಾನತ್ವಾತ್ ಓಂ || ೧೪ ||**

**2. ಓಂ ಪ್ರಕಾಶವಚ್ಚಾವೈಯರ್ಥ್ಯಂ ಓಂ || ೧೫ ||**

**3. ಓಂ ಆಹ ಚ ತನ್ಮಾತ್ರಂ ಓಂ || ೧೬ ||**

**4. ಓಂ ದರ್ಶಯತಿ ಚ ಅಥೋ ಅಪಿ ಸ್ಮರ್ಯತೇ ಓಂ || ೧೭ ||**

ಶ್ರೀಹರಿಯು ಅಪ್ರಾಕೃತ ರೂಪ ಹೊಂದಿದವನೆಂದು ಸಾಧಿಸಿದ್ದಾರೆ. ಅವನದು ಪಾಂಚಭೌತಿಕ ಶರೀರವಲ್ಲ, ಜ್ಞಾನಾನಂದಾದಿ ಸ್ವರೂಪ.

**ದಾಸಸಾಹಿತ್ಯ :**

1. ವೇದಪೀಠ ವಿರಂಚಿ ಭವ"
ಕ್ರಾದಿ ಸುರ ವಿಜ್ಞಾನದಾಯಕ
ಮೋದ ಚಿನ್ಮಯ ಗಾಯಿತ್ರೀಕ ಪವಿತ್ರ ಸೂ ಚರಿತ್ರ ।
ಛೇದ ಭೇದ ವಿಷಾದ ಕುಟಿಲಾಂ
ಕಾದಿ ಮಧ್ಯ ವಿ ದೂರ ನಾದಾ
ನಾದಿಕಾರಣ ಬಾದರಾಯಣ ಪಾಹಿ ಸತ್ರಾಣ ॥

2. ಶ್ರೀರಮಣ ಸರ್ವೇಶ ಸರ್ವಗ
ಸಾರಭೋಕ್ತ ಸ್ವತಂತ್ರ ದೋಷ ವಿ
ದೂರ ಜ್ಞಾನಾನಂದ ಬಲಮೈಶ್ವರ್ಯ ಪರಿಪೂರ್ಣ ॥
ಮೂರುಗುಣ ವರ್ಜಿತ ಸಗುಣ ಸಾ
ಕಾರ ವಿಶ್ವಸ್ಥಿತಿ ಲಯೋದಯ
ಕಾರಣ ಕೃಪಾಸಾಂದ್ರ ನರಹರೆ ಸಲಹೋ ಸಜ್ಜನರ

(ಹರಿಕಥಾಮೃತಸಾರ)

## 10. ಉಪಮಾನಾಧಿಕರಣ

**ಸೂತ್ರ :**

**1. ಓಂ ಅತ ಏವ ಚೋಪಮಾ, ಸೂರ್ಯಕಾದಿವತ್ ಓಂ|| ೧೮ ||**

ಜೀವನು ಅನಾದಿ ನಿತ್ಯನಾದಾಗ್ಯೂ "ಪೃಥಗುಪದೇಶಾತ್" ಇತ್ಯಾದಿ ರೀತ್ಯ ಹರಿಯಿಂದ ಭಿನ್ನತ್ವ, ತದೀನತ್ವ. ತತ್ಸದೃಶತ್ವರೂಪ ಧರ್ಮಗಳಿಂದ ಪ್ರತಿಬಿಂಬನಾಗಿದ್ದಾನೆ.

ದಾಸಸಾಹಿತ್ಯ :

1. ಎಲ್ಲಿ ನೋಡಲು ನೀನಿಲ್ಲದ ಸ್ಥಳವಿಲ್ಲ । ಎಲ್ಲರಲ್ಲಿ ನೀನು ಎಲ್ಲ ಪ್ರೇರಕ ನೀನು ।
ಎಲ್ಲಕ್ಕೆ ಭೇದ ಎಲ್ಲ ನಿರ್ಲೇಪ । ಚಿಲ್ಲರೆ ದೈವರ ಗಂಡ ಗೋಪಾಲ
ವಿಠಲ ನಿನ್ನ । ಬಲ್ಲವರೇ ಬಲ್ಲರು ಕಾಣೋ ಪೂರ್ಣರೇಯು ॥

(ಶ್ರೀ ಗೋಪಾಲದಾಸರು)

2. ನಾನು ನೀನು ಎನ್ನದಿರು ಹೀನಮಾನವ.

3. ಹೇಗೆ ಮೆಚ್ಚಿಸಲಿ ಅರ್ಚಿಸಲಿ ನಿನ್ನ (ಈಕ್ಷತಿ)

(ಶ್ರೀ ಕನಕದಾಸರು)

## 11. ಅಂಬುವದಾಧಿಕರಣ

ಸೂತ್ರ :

**1. ಓಂ ಅಂಬುವದಗ್ರಹಣಾತ್ತು ನ ತಥಾತ್ವಂ ಓಂ ॥ ೧೯ ॥**

ಜೀವನಿಗೆ ಭಕ್ತಿಯಿಂದ ಉಪಜ್ಞಾನ. ಭಗವದ್ ಪ್ರಸಾದ ದ್ವಾರ ಮೋಕ್ಷ, ಆದ್ದರಿಂದ ಭಕ್ತಿಯು ಅತ್ಯಂತ ಅವಶ್ಯಕ ಹಾಗೂ ಮುಖ್ಯವಾದುದು.

ದಾಸಸಾಹಿತ್ಯ :

ಭಕ್ತಿಯೆ ಪ್ರಧಾನವಾದ ಚಿಂತನೆ ನೀ ಮಾಡು
ಮುಕ್ತಿದಾಯಕ ವಿಜಯವಿಠಲ ಒಲಿವ.

(ಶ್ರೀವಿಜಯದಾಸರು)

## 12. ವೃದ್ಧಿಹ್ರಾಸಾಧಿಕರಣ

ಸೂತ್ರಗಳು :

**1. ಓಂ ವೃದ್ಧಿಹ್ರಾಸಭಾಕ್ತ್ವಮಂತರ್ಭಾವಾದುಭಯ
ಸಾಮಂಜಸ್ಯಾದೇವಂ ಓಂ ॥ ೨೦ ॥**

**2. ಓಂ ದರ್ಶನಾಚ್ಚ ಓಂ ॥ ೨೧ ॥**

ಜ್ಞಾನ ಭಕ್ತಿ ವೈರಾಗ್ಯಾದಿಗಳು ಏಕಪ್ರಕಾರ ಎಲ್ಲರಲ್ಲೂ ಒಂದೇ ರೀತಿ ಇರದೆ ಅದರಲ್ಲಿ ತಾರತಮ್ಯವಿದೆ. ಅದಕ್ಕನುಗುಣವಾಗಿ ಫಲ ನಿರೂಪಿತವಾಗಿದೆ.

ದಾಸಸಾಹಿತ್ಯ :

ಅವರವರ ಯೋಗ್ಯತೆ ಅರಿತು ಪ್ರೇರಕನಾಗಿ

ಅವರಿಗೊಲಿವೆ ಅವನೀಶ ಪುರಂದರವಿಠಲ
ನಿನ್ನದಯವೇ ಸಾಧನವೋ । ನೀ ದಯಾಪರನೋ
ನಿನ್ನವರ ಸಾಧನವೊ ಮುದ್ದು ಹಯವದನ.

**(ಶ್ರೀ ಪುರಂದರದಾಸರು)**

## 13. ಪ್ರಕೃತೈತಾವತ್ತ್ವಾಧಿಕರಣ

**ಸೂತ್ರ :**

**1.** ಓಂ **ಪ್ರಕೃತೈತಾವತ್ತ್ವಂ ಹಿ ಪ್ರತಿಷೇಧತಿ,**
**ತತೋ** ಬ್ರವೀತಿ **ಚ ಭೂಯಃ** ಓಂ || ೨೨ ||

ಶ್ರೀಹರಿಗೆ ಜಗತ್ ಪಾಲಕತ್ವ ಸಾಧಿತವಾಗಿದೆ.

**ದಾಸಸಾಹಿತ್ಯ :**

ಏನು ಕರುಣಾನಿಧಿಯೊ ಹರಿ ಮ
ತ್ತೇನು ಭಕ್ತಾಧೀನನೋ ಇ
ನ್ನೇನು ಈತನ ಲೀಲೆ ಇಚ್ಛಾ ಮಾತ್ರದಲಿ ಜಗವ ।
ತಾನೆ ಸೃಜಿಸುವ ಪಾಲಿಸುವ ನಿ
ರ್ವಾಣ ಮೊದಲಾದಖಿಳ ಲೋಕ
ಸ್ಥಾನದಲಿ ಮತ್ತವರ ನಿಟ್ಟಾನಂದ ಪಡಿಸುವನು ॥

**(ಹರಿಕಥಾಮೃತಸಾರ)**

## 14. ತದವ್ಯಕ್ತಾಧಿಕರಣ

**ಸೂತ್ರಗಳು :**

**1.** ಓಂ **ತದವ್ಯಕ್ತಮ್, ಆಹ ಹಿ** ಓಂ || ೨೩ ||

**2.** ಓಂ **ಅಪಿ ಸಂರಾಧನೇ, ಪ್ರತ್ಯಕ್ಷಾನುಮಾನಾಭ್ಯಾಂ** ಓಂ || ೨೪ ||

**3.** ಓಂ **ಪ್ರಕಾಶವಚ್ಚಾ ವೈಶೇಷ್ಯಂ** ಓಂ || ೨೫ ||

**4.** ಓಂ **ಪ್ರಕಾಶಶ್ಚ ಕರ್ಮಣ್ಯಭ್ಯಾಸಾತ್** ಓಂ || ೨೬ ||

**5.** ಓಂ **ಅತೋ ನಂತೇನ, ತಥಾ ಹಿ ಲಿಂಗಂ** ಓಂ || ೨೭ ||

ಪರಮಾತ್ಮ "ಅರೂಪಂ" ಎಂಬ ಶ್ರುತಿಯಂತೆ ಅವ್ಯಕ್ತನು. ಹಾಗಾದರೆ ಭಕ್ತಿ ಏಕೆ ಮಾಡಬೇಕೆಂದರೆ "ದ್ರಷ್ಟವ್ಯಃ ಶ್ರೋತ್ರವ್ಯಃ" ಎಂಬ ಶ್ರುತಿಯಂತೆ ಶಾಸ್ತ್ರ ವಿಷಯೀಭೂತನಾದ, ಅವ್ಯಕ್ತ ಸ್ವಭಾವನೇ ಆದ, ಬ್ರಹ್ಮನಲ್ಲಿ ಬ್ರಹ್ಮ ವಿಷಯಿಕ

ಶ್ರವಣ ಮನನ, ನಿಧಿಧ್ಯಾಸಗಳನ್ನು ಭಕ್ತಿ ಪೂರ್ವಕವಾಗಿ ಪುನಃ ಪುನಃ ಮಾಡಿದ್ದರಿಂದ ಬ್ರಹ್ಮನ ಅಪರೋಕ್ಷ ಆಗುತ್ತದೆ. "ಆತ್ಮಾವಾ" ಎಂಬ ಶ್ರುತಿಯಂತೆ ಮೋಕ್ಷಕ್ಕೆ ಜ್ಞಾನಜನ್ಯ ಪ್ರಸಾದ ಸಾಧ್ಯತ್ವ ಲಿಂಗದಿಂದ ಅವ್ಯಕ್ತತ್ವ ಪ್ರತ್ಯಕ್ಷತ್ವಗಳೆರಡೂ ಶ್ರುತಿ ದ್ವಯಾನ್ಯಥಾನು ಪಪತ್ತಿಯಿಂದ ಸಿದ್ಧಗಳಾಗುತ್ತವೆ. ಆದ್ದರಿಂದ ಭಕ್ತಿಯು ಅತ್ಯಂತ ಮುಖ್ಯ.

**ದಾಸಸಾಹಿತ್ಯ :**

1. ಅಣುವಾಗಬಲ್ಲ, ಮಹತ್ತಾಗಬಲ್ಲ, ಅಣುಮಹತ್ತೆರಡೊಂದಾಗಬಲ್ಲ । ವ್ಯಕ್ತನಾಗಬಲ್ಲ ಅವ್ಯಕ್ತನಾಗಬಲ್ಲ ವ್ಯಕ್ತಾವ್ಯಕ್ತ ಎರಡೊಂದಾಗಬಲ್ಲ । ಅಗಟನಾಘಟ-ಮಹಿಮ ನಮ್ಮ ಪುರಂದರವಿಠಲ.

(ಶ್ರೀಪುರಂದರದಾಸರು)

2, ಭಕ್ತಿಯೇ ಪ್ರಧಾನವಾದ ಚಿಂತನೆಯು ನೀ ಮಾಡು
ಮುಕ್ತಿದಾಯಕ ವಿಜಯವಿಠಲ ತಾನೇ ವಲಿವ.

(ಶ್ರೀ ವಿಜಯದಾಸರು)

## 15. ಅಹಿಕುಂಡಲಾಧಿಕರಣ

**ಸೂತ್ರಗಳು :**

1. ಓಂ ಉಭಯವ್ಯಪದೇಶಾತ್ತು ಅಹಿಕುಂಡಲವತ್ ಓಂ || ೨೮ ||
2. ಓಂ ಪ್ರಕಾಶಾಶ್ರಯವದ್ವಾ ತೇಜಸ್ತ್ವಾತ್ ಓಂ || ೨೯ ||
3. ಓಂ ಪೂರ್ವವದ್ವಾ ಓಂ || ೩೦ ||
4. ಓಂ ಪ್ರತಿಷೇಧಾಚ್ಚ ಓಂ || ೩೧ ||

"ಆನಂದಂ ಬ್ರಹ್ಮಣೋ ವಿದ್ವಾನ್" ಎಂಬ ತೈತರೀಯ ಶ್ರುತಿಯಂತೆ ಆನಂದಾದಿಗಳು ಬ್ರಹ್ಮನ ಸ್ವರೂಪ. ಶ್ರೀಹರಿ ಕೇವಲ ಶ್ರುತಿಗಮ್ಯ. ಶುಷ್ಕತರ್ಕಗಮ್ಯನಲ್ಲ. ಬ್ರಹ್ಮನಿಗೆ ಗುಣರೂಪ ಹಾಗೂ ಗುಣರೂಪಗಳೆರಡೂ ಕೂಡುತ್ತದೆ ಮತ್ತು ಭಗವದ್ ಗುಣಾದಿಗಳಿಂದ ಶ್ರೀಹರಿಗೆ ಭೇದವಿಲ್ಲ.

**ದಾಸಸಾಹಿತ್ಯ :**

ಗುಣಿಗುಣಗಳೊಳಗಿದ್ದು ಗುಣಿ ಗುಣ। ನೆನಿಸುವನು ಗುಣಬದ್ಧನಾಗದೆ ।
ಗುಣಜ ಪುಣ್ಯಾಪುಣ್ಯ ಫಲ ಬ್ರಹ್ಮಾದಿ ಚೇತನನೆ ॥
ಉಣಿಸುತವರೊಳಗಿದ್ದು ವೃಜಿನಾ । ರ್ದನ ಚಿದಾನಂದೈಕ ದೇಹನು ।

ಕೊನೆಗೆ ಸಚರಾಚರ ಜಗದ್ಭುಕುಯೆನಿಪ ನವ್ಯಯನು ॥

(ಹರಿಕಥಾಮೃತಸಾರ)

## 16. ಪರಮತಾಧಿಕರಣ

**ಸೂತ್ರಗಳು :**

1. **ಓಂ ಪರಮತಃ ಸೇತೂನ್ಮಾನಸಂಬಂಧಭೇದ ವ್ಯಪದೇಶೇಭ್ಯಃ ಓಂ** || ೩೨ ||
2. **ಓಂ ದರ್ಶನಾತ್ತು ಓಂ** || ೩೩ ||
3. **ಓಂ ಬುದ್ಧ್ಯರ್ಥಃ ಪಾದವತ್ ಓಂ** || ೩೪ ||

ಭಗವಂತನ ಗುಣಾದಿಗಳು ಮನೋವಾಕ್ ಗೋಚರವಲ್ಲದ ವಿಲಕ್ಷಣವಾದದ್ದು ಹಾಗೂ ಅಲೌಕಿಕವಾದದ್ದು, ಜೀವರದು ತದ್ವಿರುದ್ಧ ಆದ್ದರಿಂದ ಜೀವೇಶ ಭೇದ ಸಿದ್ಧಿಸುತ್ತಲಿದೆ.

**ದಾಸಸಾಹಿತ್ಯ :**

1. ಜಗದುದರ ನೀನಾಗಿ ಜಗದೊಳು ನೀನಿಪ್ಪೆ । ಜಗವು ನಿನ್ನೊಳಗಿಪ್ಪ ಸೃಜಿಸೂವಿ ।
ಸೃಜಿಸೂವಿ ಜೀವರೊಳಿದ್ದು । ಜಗದನ್ಯನೆಂದು ಕರೆಸೂವಿ ಸುವಿ ॥
2. ದ್ವಾಸುಪರ್ಣವೆಂಬ ಈ ಶ್ರುತಿಗಳಲ್ಲಿ ವಿ । ಶ್ವಾಸಮಾಡದಲೆ ಜೀವೇಶ |
ಜೀವೇಶ ಐಖ್ಯೋಪ । ದೇಶ ಮಾಡಿದ ವಾಚಂಡಾಲಾ ಸುವಿ ॥
3. ಗುಣಕಾಲಕರ್ಮಗಳು ಮನೆಮಾಡಿ ಜೀವರಿಗೆ । ಉಣಿಸುವೆ ನೀನೆ
ಸುಖದುಃಖಾ ॥
ಸುಖದುಃಖ ಮಿಶ್ರಫಲ । ವುಣದೆ ಸರ್ವತ್ರ ಬೆಳಗೂವಿ.

(ತತ್ವಸುವಾಲಿ-ಶ್ರೀ ಜಗನ್ನಾಥದಾಸರು)

## 17. ಸ್ಥಾನವಿಶೇಷಾಧಿಕರಣ

**ಸೂತ್ರಗಳು :**

1. **ಓಂ ಸ್ಥಾನವಿಶೇಷಾತ್, ಪ್ರಕಾಶಾದಿವತ್ ಓಂ** || ೩೫ ||
2. **ಓಂ ಉಪಪತ್ತೇಶ್ಚ ಓಂ** || ೩೬ ||

ಬ್ರಹ್ಮಾದಿಗಳ ಆನಂದಾದಿಗಳು ಈಶ್ವರನ ಆನಂದಾದಿಗಳಿಗೆ ಪ್ರತಿಬಿಂಬ ಈಶ್ವರನ ಗುಣಗಳಿಗೆ ವೈಚಿತ್ರವಿಲ್ಲವಾದರೂ ಬಿಂಬತ್ವ ಯುಕ್ತವಾದುದು.

**ದಾಸಸಾಹಿತ್ಯ :**

1. ಸರ್ವ ಸ್ವತಂತ್ರ ನೀನೋರ್ವನಲ್ಲದೆ ಮತ್ತಿ । ನ್ನೋರ್ವರುಂಟೆ ಜಗದೊಳು ॥
ಜಗದೊಳು ಅಜಾದಿಗಳು । ದರ್ವಿಯಂದದಲಿ ಚರಿಸೋರು

2. ನಿತ್ಯಬದ್ಧನು ನಾನು ನಿತ್ಯ ಮುಕ್ತನು ನೀನು। ಭೃತ್ಯನೋ ನಾನು ಪ್ರಭುನೀನು ॥
ಪ್ರಭು ನೀನು ಮೂಲೋಕ ವ್ಯಾಪ್ತನು ನೀನು । ಅಣು ನಾನು ॥

**(ತತ್ವಸುವಾಲಿ - ಶ್ರೀ ಜಗನ್ನಾಥದಾಸರು)**

## 18. ತಥಾನ್ಯತ್ವಾಧಿಕರಣ

**ಸೂತ್ರ :**

1. ಓಂ ತಥಾನ್ಯತ್ಪ್ರತಿ ಷೇಧಾತ್ ಓಂ || ೩೭ ||

ಧ್ಯಾನಕಾಲದಲ್ಲಿ ಯಾವ ಬ್ರಹ್ಮರೂಪ ಪುರುಷ ಪ್ರಯತ್ನದಿಂದ ತೋರುವುದೊ
ಅರ್ಥ ಬ್ರಹ್ಮ ಸ್ವರೂಪ. ಇಲ್ಲವಾದರೆ ಧ್ಯಾನ ವ್ಯರ್ಥವಾಗುವುದು. ಬ್ರಹ್ಮ ಅವ್ಯಕ್ತ.

**ದಾಸಸಾಹಿತ್ಯ :**

ಧ್ಯಾನವನು ಮಾಡು ಬಿಂಬ ಮೂರುತಿಯ || ಪ ||

ಆನಂದದಲಿ ಕುಳಿತು ಅಂತರಂಗದಲಿ || ಅ ||

ಜ್ಞಾನ ಪ್ರಕಾಶದಲಿ ಇದ್ದು ನಿನ್ನ ಹೃದಯ । ಸ್ಥಾನದಲಿ
ಅಷ್ಟದಳ ಕಮಲ ಮಧ್ಯ ।
ಶ್ರೀನಿವಾಸನ ಮೂರ್ತಿ ನಿಲ್ಲಿಸಿ ಬಾಹ್ಯದಲಿ । ಏನೇನು ಪೂಜೆಯನು
ಉಳ್ಳವನು ಮಾಡೊ ॥

ಈ ಪರಿ ಧ್ಯನಿಸಲು ದೇವಕರುಣವ ಮಾಡ । ಪಾಪ ಸಂಚಿತವು ಪ್ರಾರಬ್ಧ ನಾಶ॥
ಅಪರೋಕ್ಷನಿನಾಗಿ ತನ್ನಯೋಗ್ಯತೆದಷ್ಟು। ಗೋಪಾಲ ವಿಜಯವಿಠಲ
ಒಲಿವ ನಿಜ ॥

**(ಶ್ರೀ ವಿಜಯದಾಸರು)**

## 19. ಸರ್ವಗತತ್ವಾಧಿಕರಣ

**ಸೂತ್ರ:**

**1. ಓಂ ಅನೇನ ಸರ್ವಗತತ್ವಮಾಯಾಮಯಾದಿ**
**ಶಬ್ದಾದಿಭ್ಯಃ ಓಂ || ೩೮ ||**

ಸರ್ವ ದೇಶದಲ್ಲಿ, ಸರ್ವಕಾಲದಲ್ಲಿ, ಸರ್ವವಸ್ತುಗಳಲ್ಲಿ ಎಲ್ಲದಕ್ಕೂ ಶ್ರೀಹರಿದಲೇ ಜಗಜನ್ಮಾದಿಗಳು ಇತರರಿಂದಲ್ಲ, ಶ್ರೀಹರಿಯೇ ಸರ್ವತ್ರ ಸೃಷ್ಟ್ಯಾದಿಕರ್ತ.

**ದಾಸಸಾಹಿತ್ಯ :**

ಜಗಜನ್ಮಾದಿಕರ್ತ ಗೋವಿಂದ, ಉದರದಿ ಲೋಕ
ಲಘುವಾಗಿ ಧರಿಸಿದ ಮುಕುಂದ, ಭಕ್ತರ ಮನಕೆ
ಝಗ ಝಗಿಸುತ ಪೊಳೆವಾನಂದ, ನಿಗಮಾವಳಿಯಿಂದ

**(ಶ್ರೀ ಗೋಪಾಲದಾಸರು)**

## 20. ಫಲಾಧಿಕರಣ

**ಸೂತ್ರಗಳು :**

1. ಓಂ ಫಲಮತಃ ಉಪಪತ್ತೇಃ ಓಂ || ೩೮ ||
2. ಓಂ ಶ್ರುತತ್ವಾಚ್ಚ ಓಂ || ೩೯ ||
3. ಓಂ ಧರ್ಮಂ ಜೈಮಿನಿರತ ಏವ ಓಂ || ೪೦ ||
4. ಓಂ ಪೂರ್ವಂ ತು ಬಾದರಾಯಣಃ,
   ಹೇತುವ್ಯಪದೇಶಾತ್ ಓಂ || ೪೧ ||

ಈಶ್ವರನಿಂದಲೇ ಫಲ - ಕರ್ಮದಿಂದಲ್ಲ, "ವಿಜ್ಞಾನಂ ಆನಂದಂ ಬ್ರಹ್ಮ" ಕಾರಣತ್ವ ಈಶ್ವರನಿಗೇನೇ, "ಪುಣ್ಯೇನ ಪುಣ್ಯಂ" ಇತ್ಯಾದಿಗಳು ಗೌಣ ಫಲ ಫಲಪ್ರದ ಪರಮಾತ್ಮನೆ.

**ದಾಸಸಾಹಿತ್ಯ :**

ಏನು ಕೇಳಿದರೇನು ನೋಡಿದ । ರೇನು ಓದಿದರೇನು ಪೇಳಿದರೇನು
ಪಾಡಿದರೇನು ಮಾಡಿದರೇನು ದಿನದಿನದಿ
ಶ್ರೀನಿವಾಸನ ಜನ್ಮ ಕರ್ಮ ಸ । ದಾನುರಾಗದಿ ನೆನೆದು ತತ್ತ
ಸ್ಥಾನದಲಿ ತದ್ರೂಪಕನ್ನಾಮಕನ ಸ್ಮರಿಸದಲೆ.

**(ಹರಿಕಥಾಮೃತಸಾರ)**

ನೀ ದಯಾಪರನೋ ನಿನ್ನಪರ ಸಾಧನವೋ ಮುದ್ದು ಹಯವದನ
ಕೇಳಿದ ಸುಖಸದನ. . . . . ತವದಯವೇ ಸಾಧನವೊ.

**(ಶ್ರೀಪುರಂದರದಾಸರು)**

–o–o–o–

# ತೃತೀಯಾಧ್ಯಾಯ - ತೃತೀಯಪಾದ

## 1. ಸರ್ವವೇದಾಧಿಕರಣ

ಸೂತ್ರಗಳು :

1. ಓಂ ಸರ್ವವೇದಾಂತಪ್ರತ್ಯಯಂ ಚೇತ್, ಏಕನಾದ್ಯ
ವಿಶೇಷಾತ್ ಓಂ || ೧ ||

2. ಓಂ ಭೇದಾನ್ನೇತಿ ಚೇದುಕ ಸ್ಯಾಮಪಿ ಓಂ || ೨ ||

3. ಓಂ ಸ್ವಾಧ್ಯಾಯಸ್ಯ ತಥಾತ್ವೇನ ಹಿ ಸಮಾಚಾರೇ
ಧಿಕಾರಾಚ್ಚ ಓಂ || ೩ ||

4. ಓಂ ಸಲಿಲವಚ್ಚ ತನ್ನಿಯಮಃ ಓಂ || ೪ ||

5. ಓಂ ದರ್ಶಯತಿ ಚ ಓಂ || ೫ ||

ಪ್ರತಿ ಒಬ್ಬರೂ ಸಮ ತಮಗೆ ನಿಕರವಾದ ಶಾಖಾ ವೇದಾಧ್ಯಯನ ಮಾಡ ಬೇಕು. ಸಮಗ್ರವೇದಾಧಿಕಾರವಿಲ್ಲ. ಇದರಿಂದ ಬ್ರಹ್ಮಜ್ಞಾನ ಸಂಪೂರ್ಣ ಆಗಲವ ಕಾಶವಿಲ್ಲ ಎಂದರೆ "ಸರ್ವೇ ವೇದಾ ಯತ್ಪದಮಾಮನಂತಿ ಪರಮೋಹಿದೇವೋ" ಇತ್ಯಾದಿ ಶ್ರುತಿಗಳಂತೆ ಸರ್ವ ವೇದಗಳಲ್ಲಿ ಹೇಳಿದ ಪ್ರಕಾರ ಪಾತ್ರನಾದವನು ಶಕ್ತ್ಯನುಸಾರ ಸರ್ವ ಸಚ್ಛಾಸ್ತ್ರ ಶ್ರವಣ ಮನನಾದಿಗಳನ್ನು ಸರ್ವರೂ ಮಾಡಲೇಬೇಕು.

ದಾಸಸಾಹಿತ್ಯ :

ಸಿರಿಲೋಗಪಟ್ಟಿಕ ಅಖಿಳಾಗಮ ಸುಮುಖಿಷ್ಕ । ಬ್ರಹ್ಮಾಂಡ ಸಾಧ್ಯಸುಖಿರೂಪಿ ॥
ಸುಖದೂಟ ನಿನ್ನಂಥ ಸಾಧಿಸಿರಲು ದುರಿತ ಒಲುಂಟೇ ನಿಪ್ಪ ॥

(ತತ್ವ ಸುವ್ವಾಲಿ - ಶ್ರೀ ಜಗನ್ನಾಥದಾಸರು)

## 2. ಉಪಸಂಹಾರಾಧಿಕರಣ

ಸೂತ್ರಗಳು :

ಉಪಸಂಹಾರೋ ಥಾರ್ಭೇದಾದ್ವಿಧಿ
ಶೇಷವ ಸ್ಸಮಾನೇ ಚ ಓಂ || ೬ ||

2. ಓಂ ಅನ್ಯಥಾತ್ವಂ ಶಬ್ದಾದಿತಿ ಚೇನ್ನ, ಅವಿಶೇಷಾತ್ ಓಂ || ೭ ||

3. ಓಂ ನ ವಾ ಪ್ರಕರಣಭೇದಾತ್ಪರೋವರೀಯ
ಸ್ತ್ವಾದಿವತ್ ಓಂ || ೮ ||

**4. ಓಂ ಸಂಜ್ಞಾತಶ್ಚೇತ್ತದುಕ್ತಮಸ್ತಿ ತು ತದಪಿ ಓಂ || ೯ ||**

ಸರ್ವವೇದೋಕ್ತ ಪರಿಜ್ಞಾನ ಸಂಪಾದನೆ ಧ್ಯಾನಕ್ಕೆ ಪ್ರತಿಬಂಧಕ ಎಂದರೆ "ಉಪಾಸ್ಯ ಏಕಃ ಸರ್ವೇಗುಣಃ" ನಾಮಾವಾ ಏತಃ" ಇತ್ಯಾದಿ ಶ್ರುತಿಗಳಂತೆ ಶ್ರೀಹರಿಯನ್ನು ಆತ್ಮ ಎಂದು ಉಪಾಸನ ಮಾಡಲೇಬೇಕು ಇದಕ್ಕೆ ವೇದಾರ್ಥ ಪರಿಜ್ಞಾನ ಅತ್ಯಂತ ಸಾರ್ಥಕವು, ಸರ್ವವೇದೋಕ್ತಗುಣೋಪಸಂಹಾರಪೂರ್ವಕ ಉಪಾಸನಾ ಕರ್ತವ್ಯತ್ವವು ಸಮರ್ಥನೀಯವಾಗಿದೆ.

**ದಾಸಸಾಹಿತ್ಯ :**

"ಶಾಶನಾಶನೇ ಅಭಿ" ಯಂ । ಬೀ ಶ್ರುತಿ ಪ್ರತಿಪಾದ್ಯನೆನಿಸುವ ।
ಕೇಶವನ ರೂಪದ್ವಯವ ಚಿದ್ದೇಹ ದೊಳ್ ಹೊರಗೆ ॥
ಬೇಸರದೆ ಸದ್ಭಕ್ತಿಯಿಂದ ಉ । ಪಾಸನೆಯ ಗೈಯುಕ್ತ ಬಧರುಹು ।
ತಾಶನನ ವೋಲಿಪ್ಪನೆಂದನವರತ ತುತಿಸುವರು ॥

**(ಹರಿಕಥಾಮೃತಸಾರ)**

## 3. ಪ್ರಾಪ್ತ್ಯಧಿಕರಣ

**ಸೂತ್ರ :-**

**1. ಓಂ ಪ್ರಾಪ್ತೇಶ್ಚ ಸಮಂಜಸಂ ಓಂ || ೧೦ ||**

ಅಧಿಕಾರ ಬೇಧದಿಂದ ಭಗವದುಪಾಸನೆಯಲ್ಲಿ ಅವರವರ ಯೋಗ್ಯತಾನುಸಾರ ಔಪಾಸನೆ. ಅಧಿಕಾರ ಬೇದದಿಂದ ವ್ಯವಸ್ಥೆಯು ಉಪಪನ್ನವಾಗುವುದರಿಂದ ದ್ವಿರೂಪ ಧ್ಯಾನವು ಯುಕ್ತವಾದುದು.

**ದಾಸಸಾಹಿತ್ಯ :-**

ಅರ್ಚಾ ಅರ್ಚನೆಯ ಮಾಡು ಅಧಿಕಾರ ಬೇಧದಿಂದ | ನಿಚ್ಚ ವರ್ಜಿತ ಕಾಮ-ನಾಗಿ ಬಾಗಿ | ಅಚ್ಯುತ ದೈವವೆಂದು ಆಹ್ಲಾದದಿಂದ ಸದಾ । ಸಚ್ಚಿದಾನಂದಾತ್ಮಾದಿ ಗುಣಗಳಿಂದ । ಮೆಚ್ಚಿಸು ಮನಸು ಪೂರ್ವಕದಿಂದ ಯೋಗ್ಯತಾದಸಿತು । ಮೆಚ್ಚಿಸು ಹರಿಯವೊಳಗೆ ಹೊರಗೆ ತಿಳಿದು ಸಚ್ಚಿದಾನಂದಾದಿಗಳ ಗುಣಗಳಿಂದ ಧ್ಯಾನಗೈದು । ಎಚ್ಚರನಾಗು ನಿನ್ನ ಯೋಗ್ಯತಾದನಿತು . . . . . . . ಸಚ್ಛಾಸ್ತ್ರ ಶ್ರವಣ ಮನನ ಧ್ಯಾನೋಪಾಸನದಿಂದ ।। ತಚ್ಚಬ್ಧವಾಚ್ಯ ಹರಿಯ ನೋಡಬೇಕು | ಎಚ್ಚರ ದೈವ ನಮ್ಮ ವಿಜಯವಿಠಲರೇಯನ್ನು । ನಿಚ್ಚ ಈ ಪರಿಯಿಂದ ಚಿಂತಿಸಬೇಕು ಸತತ ॥

**(ಸುಳಾದಿ - ಶ್ರೀ ವಿಜಯದಾಸರು)**

## 4. ಸರ್ವಭೇದಾ ಕರಣ

**ಸೂತ್ರ :**

**1. ಓಂ ಸರ್ವಭೇದಾದನ್ಯತ್ರೇಮೇ ಓಂ**

ಬ್ರಹ್ಮಾದಿಗಳು ವಿಲಕ್ಷಣವಾದ ಸಂಪೂರ್ಣಾನಂದಾತ್ಮಕವಾದ, ಭಗವಂತನ ಸರ್ವ ಗುಣ, ರೂಪಾಧಿಗಳಿಗೂ ಅಭೇಧದಿಂದ ಉಪಾಸನಾ ಮಾಡಿ ಮೋಕ್ಷ ಫಲ ಪ್ರಾಪ್ತ-ರಾಗುತ್ತಾರೆ.

**ದಾಸಸಾಹಿತ್ಯ :-**

1. ಅಣು ಅಣು ಪರಮಾಣು ಅತ್ಯಣು ಬಲು ಅಣು | ಘನ ಘನ ರೂಪ ಘನ ತಾನು ಘನ ತಾನು । ಅಣು ರೂಪದಾ ಮನಸ್ಸಿಗೆ ಬಂದನ್ನ | ಎಣಿಕೆ ಹಿಡಿದೆ ನೆನಲು ಮನಕೆ ಸಿಲ್ಕುವನಲ್ಲಾ । ಘನ ರೂಪಾದಾಪ್ರನ್ಪ ಅಕಾರದೊಳಗನ್ನು । ಅಣುವಾಗಿ ತೋರೋದು ಅವ್ಯಾಕೃತ ದ್ರವ್ಯ ಘನ ವ್ಯಾಪ್ತಿವುಳ್ಳ ದೇವರು ಸರಿಯೇಸೇ । ಘನ ಹರಿ ದ್ರವ್ಯದಲಿ ಅಣುವಾಗಿ ತೋರೋದು । ಚಿನುಮಯ ಹರಿ ತಾನು ಚಿದ್ರೂಪಕ್ಕ ಬಿಂಬ । ಏನಸಲ್ಲಾ ಮನುಜಾ ಘನ ಸೋಜಿಗವುಂಟು । ಆನುವಾದ ಪಂಚ ಮಹಾಭೂತ ಅವ್ಯಕ್ತಕ್ಕೆ ಮನಸಿಜನಯ್ಯ ತಾ ಬಿಂಬನಾಗಿಪ್ಪನು । ಎಣಿಸಿಧೇನಿಸಿಪ್ಪರಿಗೆ ಎಲ್ಲಕ್ಕೆ ಹರಿಬಿಂಬ । ಘನ ಜಾಗ.ತಾನಯ್ಯ ಗಣನೆ ಮಾಡನು ಅನ್ಯ | ಸನಕಾದಿಗಳೊ-ಡೆಯ ಗೋಪಾಲ ವಿಠಲ । ಅನಿಮಿಷರಿಗೆ ತಿಳಿದೂ ಅಗೋಚರನಯ್ಯ ॥

2. ವಿಶ್ವರೂಪದರುಶನಾಧಿಕಾರಿಗಳು ಅಂದು । ವಿಶ್ವನಾಮಕ ಗೋಪಾಲ ವಿಠಲನ ಭಜಿಪರು ॥

(ಉಪಾಸನಾ ಸುಳಾದಿ- ಶ್ರೀಗೋಪಾಲದಾಸರು)

## 5. ಆನಂದಾಧಿಕರಣ

**ಸೂತ್ರ :**

**1. ಓಂ ಆನಂದಾದಯಃ ಪ್ರಧಾನಸ್ಯ ಓಂ** || ೧೨ ||

"ತಂಯಥಾ ಯಥೋಪಾಸತೇ" ಎನ್ನುವ ಶ್ರುತಿಯಂತೆ ಮುಮುಕ್ಷುಗಳ ಉಪಾ-ಸನಾ ತಾರತಮ್ಯ ವ್ಯಕ್ತವಾಗಿದೆ. ಇದರಲ್ಲಿ ನಾಲ್ಕು ವಿಧ ಪರಮಾತ್ಮ ನಿರ್ದೋಷ, ಜ್ಞಾನರೂಪಿ, ಸುಖರೂಪಿ ಹಾಗೂ ಸ್ವಾಮಿ ಎಂದು ಅವರವರ ಯೋಗ್ಯತಾನುಸಾರ ಉಪಾಸನೆಮಾಡಿ ಫಲ ಪಡೆಯುವರು.

**ದಾಸಸಾಹಿತ್ಯ :-**

ಜ್ಞಾನ ಜ್ಞೇಯ ಜ್ಞಾತೃಯೆಂಬಭಿ । ಧಾನದಿಂದ ಬುದ್ಧ್ಯಾದಿಗಳ ಧಿ
ಷ್ಠಾನದಲಿ ನೆಲೆಸಿದ್ದು ಕರೆಸುತ ತತ್ತ್ವದಾಪ್ವಯದಿ ॥
ಭಾನು ಮಂಡಲಗ ಪ್ರದರ್ಶಿತ । ತಾನೆನಿಸಿ ವಶನಾಗುವನು ಶುಕ ।
ಶೌನಕಾದಿ ಮುನೀಂದ್ರ ಹೃದಯಾಕಾಶ ಗತ ಚಂದ್ರ ॥

## 6. ಪ್ರಿಯಶಿರಸ್ತ್ವಾಧಿಕರಣ

**ಸೂತ್ರ :-**

**1. ಓಂ ಪ್ರಿಯಶಿರಸ್ತ್ವಾದ್ಯ ಪ್ರಾಪ್ತಿರುಪ ಚ
ಯಾಪಚ ಯೌ ಹಿ ಭೇದೇ ಓಂ** ॥ ೧೩ ॥

"ತಸ್ಯ ಪ್ರಿಯಮೇವ ಶಿರ :" ಇತ್ಯಾದಿ ಶ್ರುತಿಗಳಂತೆ ಗುಣೋಪಾಸನ ಪ್ರಾಪ್ತಿ ಸರ್ವರಿಗೂ ಇಲ್ಲಿ ಪ್ರಧಾನವಾದ ಮೋಕ್ಷಪ್ರಾಪ್ತಿಗೆ ತಾರತಮ್ಯ ಉಪಾಸನಾ ವೃದ್ಧಿ ಹ್ರಾಸಾದಿಗಳನ್ನು ಅಂಗೀಕರಿಸಬೇಕು ಎಲ್ಲರಿಗೂ ಒಂದೇರೀತಿ ಉಪಾಸನೆ ಸಲ್ಲ.

**ದಾಸಸಾಹಿತ್ಯ :**

1. ಗುಣಿ ಗಣಗಳೊಳಗಿದ್ದು ಗುಣಿ ಗುಣ । ನೆನಿಸುವನು ಗುಣಬದ್ಧನಾಗದೆ ।
ಗುಣಜ ಪುಣ್ಯಾಪುಣ್ಯಫಲ ಬ್ರಹ್ಮಾದಿ ಚೇತನಕೆ ॥ "
ಉಣಿಸುತವರೊಳಗಿದ್ದು ವೃಜಿನಾ । ರ್ದನ ಚಿದಾನಂದೈಕ ದೇಹನು
ಕೊನೆಗೆ ಸಚರಾಚರ ಜಗದದ್ಭುತಯೆನಿಪ ನವ್ಯಯನು ॥

2. ಮಾರಮಣನವರವರ ಯೋಗ್ಯತೆ । ಮೀರದಲೆ ಗುಣ ಕರ್ಮಗಳಮಿನು ।
ಸಾರನಡೆಸುವ ದೇವನಿಗೆ ವೈಷಮ್ಯ ವೆಲ್ಲಿಹುದೋ ॥

(ಹರಿಕಥಾಮೃತಸಾರ)

## 7. ಇತರಾಧಿಕರಣ

**ಸೂತ್ರ :**

**1. ಓಂ ಇತರೇ ತ್ವರ್ಥ ಸಾಮಾನ್ಯಾತ್ ಓಂ** ॥ ೧೪ ॥

ಉಪಾಸನೆಯು ಯೋಗ್ಯತಾ ನಿರ್ಣಯಕ್ಕನುಸಾರವಾಗಿ ಆಗುತ್ತದೆ. ಆದ್ದರಿಂದ ದೇವಾದಿಗಳಿಗೆ ಬಹುಗುಣ ಉಪಾಸನೆ ಸಮರ್ಥಿಸಲ್ಪಟ್ಟಿದೆ. ಮನುಷ್ಯೋತ್ತಮರಿಗೆ ನಾಲ್ಕು ಗುಣಮಾತ್ರ,

**ದಾಸಸಾಹಿತ್ಯ :—**

ಗರುಡಾದಿಗಳಿಗೆ ಎಂಭತ್ತು । ಇಂದ್ರಾದಿಗಳಿಗೆ ಇಪ್ಪತ್ತು । ಮರುತಾಹಂಕಾರ

ಹದಿನೆಂಟು ಅನಿರುದ್ಧಾದಿಗಳಿಗೆ । ಯರಡೆಂಟು ದಕ್ಷ ತುರ್ದಶ ಚ ಪ್ರವಹ । ಮರುತ ದ್ವಾದಶ ಹತ್ತು ಸೂತ್ರ ಚಂದ್ರಾದ್ಯರು । ವರುಣ ನಾರದ ವಿಡಿದು ಮಿತ್ರರಿಗೆ ವಂಬತ್ತು । ಯರಡೆಂಟು ನಾಲ್ಕು ಉಕ್ತ ಶೇಷರಿಗೆ ನಿಜವೆನ್ನಿ । ಮರಳಿ ಸನಕಾದಿಗಳಿಗೆ ಸಪ್ತ ಪರ್ಜನ್ಯ ಪುಷ್ಕರ ತನಕ ಆರು ಕರ್ಮಜ ದೇವತೆಗಳ ಐದು । ಅರಿವುದು ಅಜಾ-ನಜ ದೇವರು ಗೋಪಸ್ತ್ರೀಯರು ಚಿರರವ್ಯ ಪಿತರು । ಸುರ ಗಂಧರ್ವ ಮೂರೆರಡು ಅರಿವುದು ಅಜಾನಜ । ನರ ಗಂಧರ್ವ ಮನುಜೋತ್ತಮ ತೃಣಾಂತವಾಗಿ ಇನಿತು । ಪರಿಮಿತಿವುಂಟು ಪಾದೋನ ಪಾದ ಸಾರ್ಧವು । ಪರಮೇಷ್ಟಿ ಮಾನದಿಂದ ತಿಳಿವದು ತೃಣಾಂತ ತಾರತಮ್ಯ ಅಪರೋಕ್ಷ ಚರ್ಮ ದೇಹ ಪರ್ಯಂತ । ಪರಮ ಪುರುಷಹರಿ ವಿಜಯ ವಿಠಲರೇಯ | ಕರುಣಾಂಬುಧಿ ಇಂತು ಮುಕುತಿ ಮಾರ್ಗವ ಕೊಡುವಾ ॥

(ಸುಳಾದಿ-ಶ್ರೀ ವಿಜಯದಾಸರು)

## 8. ಆಧ್ಯಾನಾಧಿಕರಣ

**ಸೂತ್ರಗಳು :–**

**1. ಓಂ ಆಧ್ಯಾನಾಯ ಪ್ರಯೆದೇಜನಾಭಾವಾತ್ ಓಂ ॥ ೧೫ ॥**

**2. ಓಂ ಆತ್ಮ ಶಬ್ದಾಚ್ಚ ಓಂ ॥ ೬೦ ॥**

ಶ್ರೀಹರಿಯ ಗುಣೋಪಸಂಹಾರ ಅನುಪಸಂಹಾರಗಳನ್ನು ಸಮರ್ಥಿಸುತ್ತಾ, "ಆತ್ಮೇತ್ಯೇವೋಪಾಸೀತ" ಎನ್ನುವ ಶ್ರುತಿಯಲ್ಲಿ ಅನ್ಯವ್ಯವಚ್ಛೇದ ಪೂರ್ವಕವಾಗಿ ಆತ್ಮತ್ಯೋ ಪಾಸನವನ್ನು ವಿಧಾನ ಮಾಡಿದ್ದರಿಂದ ಉಪಸಂಹಾರ ಅನುಪಸಂಹಾರಗಳೆರಡೂ ಅಧಿಕಾರ ಭೇದದಿಂದ ಮಾಡಬೇಕು. ಎಲ್ಲಾ ಗುಣಗಳ ಜ್ಞಾನ ಧ್ಯಾನ ರೂಪಾದಿಗಳಿಂದ ಅಪರೋಕ್ಷ ಜ್ಞಾನ ರೂಪವಾದ ಫಲ ಲಭಿಸುತ್ತಲಿದೆ.

**ದಾಸಸಾಹಿತ್ಯ :–**

ಜ್ಞಾನ ಪ್ರಕಾರದಲಿ ಇದ್ದು ನಿನ್ನ ಹೃದಯ
ಸ್ಥಾನದಲಿ ಅಷ್ಟದಳಕರ್ಮ ಮಧ್ಯ
ಶ್ರೀನಿವಾಸನ ಮೂರ್ತಿ ನಿಲಿಸಿ ಬಾಹ್ಯದಲಿ
ಏನೇನು ಪೂಜೆಯನು ಉಳ್ಳಿದನು ಮಾಡೊ ॥ ೬ ॥

ಈ ಪರಿ ಧೇನಿಸಲು ದೇವ ಕರುಣವ ಮಾಡಿ
ಪಾಪ ಸಂಚಿತವು ಪ್ರಾರಬ್ಧ ನಾಶ
ಅಪರೋಕ್ಷಿತನಾಗಿ ತನ್ನ ಯೋಗ್ಯತೆದಷ್ಟು

ಗೋಪಾಲ ವಿಜಯವಿಠಲ ಸೊಲಿವನಾಗ || ೭ ||

(ಶ್ರೀ ವಿಜಯದಾಸರು)

## 9. ಆತ್ಮಗೃಹೀತ್ಯಧಿಕರಣ

**ಸೂತ್ರ :-**

**1. ಓಂ ಆತ್ಮಗೃಹೀತಿರಿತರವದುತ್ತರಾತ್ ಓಂ || ೧೭ ||**

ಉಪಾಸನೆಯಲ್ಲಿ ಆನಂದಾದಿ (ಗುಣಾದಿಗಳನ್ನು) ನಿಯಮಗಳನ್ನು ಸಮರ್ಥಿಸುತ್ತಾ, ಸರ್ವಾಧಿಕಾರಕವಾದ ಆನಂದಾದಿ ಚತುರ್ಗುಣೋಪಾಸನವು ಯುಕ್ತವಾದುದೆಂದು ಸಾಧಿತವಾಗಿದೆ.

**ದಾಸಸಾಹಿತ್ಯ :-**

ಕರುಣ ಶಾಂತ ಶುಭ ನೋಟ. ಕಂಗ
ಳಿರಡರ ಚೆಲುವಿಕೆ ಮಾಟಕಿನ್ನು
ಅರವಿಂದ ಸರಿಯಲ್ಲ ದಿಟ- ಅಲ್ಲಿ
ತರಣಿ ಚಂದ್ರಮರ ಕೋಟಿ, ಅಪಾ
ಶರಣ ಜನರ ಮನೋ.ಹಲ್ಲಾಸ ವಾರ್ಧಿಗೆ ಸುಧಾ
ಕರ ದುಷ್ಟ ಜನರ ತಿಮಿರಕ್ಕೆ ಭಾಸ್ಕರನ್ನ
ಧ್ಯಾನಿಸು ಶ್ರೀಹರಿಯನ್ನು ಧ್ಯಾನಿಸು.

## 10. ಅನ್ವಯಾಧಿಕರಣ

**ಸೂತ್ರ :-**

**1. ಓಂ ಅನ್ವಯಾದಿತಿ ಚೆತ್ಸ್ಯಾದವ ಧಾರಣಾತ್ ಓಂ || ೮೧ ||**

ಆತ್ಮ ಶಬ್ದಕ್ಕೆ ಸರ್ವಗುಣವಾಚಕತ್ವ ವಿದ್ದರೂ ತತ್ತ್ ಗುಣೋಪಾಸನೆಗೆ ಯೋಗ್ಯರಾದವರನ್ನು ಕುರಿತು ಸರ್ವಗುಣಗಳನ್ನು ಹೇಳಿದೆ ಎನ್ನುವುದು ಅನುಭವ ಸಿದ್ಧವಾದ್ದರಿಂದ ಇಲ್ಲಿ ಹೇಳಿದ ಗುಣಗಳು ಸರ್ವೋಪಾಸ್ಯಗಳಾದುವು.

**ದಾಸಸಾಹಿತ್ಯ :-**

ನಿಗಮತತಿಗಳಿಗೆ ವೇದ್ಯನಾಗದ ನಿನ್ನ । ಅಗಣಿತ ಮಹಿಮೆ ಲಕುಮಿ ಬೊಮ್ಮ ಭವಾ । ದಿ ಗಳು ತಾವರಿಯರು ಸಾಕಲ್ಯ ಮಂದ ಜೀ । ವಿಗಳಿಗೆ ಗೋಚರಿಸುವುದೇ ನಿನ್ನರೂಪ ಭಗವಂತ . . . .

**(ನರಸಿಂಹ ಸುಳಾದಿ – ಶ್ರೀಜಗನ್ನಾಥದಾಸರು)**

ಸುಮನಸ್ವಾಮಿ ಮದಂತರ್ಯಾಮಿ । ಸರ್ವಾಂತರ್ಯಾಮಿ
ಅಮೇಯಾತ್ಮ ನಿರ್ಗುಣ ನಿಷ್ಕಾಮಿ । ಸೇವಿತ ಶ್ರೀಭೂಮಿ
ಶಮಲ ವಿವರ್ಜಿತ ಅಮಿತ ಸುಗುಣ ಪೂರ್ಣ । ಅಮಲ ಮಹಿಮ
ಖಳದಮನ ದಯಾಳೋ-ಬಾವೇಂಕಟ ಶೈಲಾಧಿ ಪಮನ್ಮಕೆ ||

**(ಶ್ರೀಜಗನ್ನಾಥದಾಸರು)**

## 11. ಕಾರ್ಯಾಧಿಕರಣ

**ಸೂತ್ರ :-**

**1. ಓಂ ಕಾರ್ಯಾಖ್ಯಾನಾದ ಪೂರ್ವಂ ಓಂ || ೧೯ ||**

"ಅಲೌಕಿಕಾಸ್ತಸ್ಯ ಗುಣಾಃ ಎನ್ನುವ ಶ್ರುತಿಯಂತೆ ಮೋಕ್ಷಕ್ಕೆ ಅಲೌಕೀಕ ಗುಣಗಳನ್ನು ಹೇಳಿದ್ದರಿಂದ ಅಂತಹ ಮೋಕ್ಷವು ಅಲೌಕೀಕ ಗುಣೋಪಾಸನೆಯಿಂದ ಲಭಿಸುತ್ತಲಿದೆ ಅಂದರೆ ಮೋಕ್ಷಕ್ಕೆ ಅಪೂರ್ವತ್ವ ಹೇಳಿದ್ದರಿಂದ ಗುಣಸಮುದಾಯವು ಅಲೌಕೀಕವನ್ನು ಉಪಸಂಹಾರ ಮಾಡಿ ಧ್ಯಾನಿಸತಕ್ಕದ್ದು.

**ದಾಸಸಾಹಿತ್ಯ :-**

ಆವ ಜನುಮದ ತಾಯಿ ಆವ ಜನುಮದ ತಂದೆ
ಆವಜನುಮದ ಸತಿ ಆವಜನುಮದ ಸುತರು
ಆವಜನುಮದ ಬಂಧು ಆವಜನುಮದ ಬಳಗ
ಆವಜನುಮದ ಪಿಂಡ ಆವಂಗೆ ಜನಿಸುವೆವೊ
ಸಿ: ವೊಲಿದು ಪಾಲಿಸೈ ಸಿರಿ ಕೃಷ್ಣರಾಯ.

**(ಶ್ರೀ ವ್ಯಾಸರಾಯರ ಉಗಾಭೋಗ)**

## 12. ಸಮಾನಾಧಿಕರಣ

**ಸೂತ್ರಗಳು :-**

**1. ಓಂ ಸಮಾನ ಏವಂ ಚಾ ಭೇದಾತ್ ಓಂ || ೨೦ ||**

**2. ಓಂ ಸಂಬಂಧಾ ದೇವಮನ್ಯತ್ರಾಪಿ ಓಂ || ೨೧ ||**

"ಗುಣಕ್ರಿಯಾಬಯೋಃ ವಿಷ್ಣೋಃ" ಎನ್ನುವ ಶ್ರುತಿಯಂತೆ ಬ್ರಹ್ಮಾಣಿ ಬ್ರಹ್ಮರಿಗೆ ಅದುಪಾಸನೆ ಆಗುವುದಿಲ್ಲ. "ಗಾಣಾಸ್ತ್ವೈಪಿಕ್ರಮಾದ್ಯಾಶ್ಚ" ಎನ್ನುವ ಶ್ರುತಿಯಂತೆ ಬ್ರಹ್ಮನಿಗೇನೇ ಯೋಗ್ಯವಾದದ್ದು. ಬ್ರಹ್ಮನಿಂದ ಉಪಾಸ್ಯತ್ವವಿದ್ದಂತೆ ಸರಸ್ವತೀಗೆ ನಿತ್ಯ ವಿಶ್ರಾಂತ್ಯಾದಿ ಕ್ರಿಯೆಯಲ್ಲಿ ಅಂತರ್ ಭಾವವಿಲ್ಲದಲೇ ಉಪಾಸ್ಯತ್ವವಿದ್ದುದ್ದ-

**ಸೂತ್ರ :-**

ಂದ ಪ್ರತ್ಯೇಕ ಉಪಾಸ್ಯತ್ವವಿಲ್ಲ. ಆದ್ದರಿಂದ ಅವರ ಎಲ್ಲಾ ಉಪಾಸನೆಯಲ್ಲಿಯೂ ಶಲಾನು ಸಾರಿತ್ವವೇ ಯುಕ್ತವಾದದ್ದು.

**ದಾಸಸಾಹಿತ್ಯ :-**

1. ಹರಿ ಮಾಡ್ದ ಮರ್ಯಾದೆ ಅನುಭವಿಸಲೀ ಬೇಕು
   ಸರಸಿಜ ಭವಾದ್ಯರಿಗೆ ಬಿಡದು ॥ ಪ ॥

2. ವಾಣಿ ಪರಮ ಕಲ್ಯಾಣಿನಮೋ । ವಾರಿಜೋದ್ಭವನ ರಾಣಿ
   ನಾರಿ ಶಿರೋಮಣಿ ॥ ಅ ॥

(ಶ್ರೀ ವಿಜಯದಾಸರು)

## 13. ನವಾಧಿಕರಣ

**ಸೂತ್ರಗಳು :-**

**1. ಓಂ ನವ ವಿಶೇಷಾತ್ ಓಂ ॥ ೨೨ ॥**

**2. ಓಂ ದರ್ಶಯತಿ ಚ ಓಂ ॥ ೨೩ ॥**

"ಆತ್ಮ ಶಬ್ದಶ್ಚ" ಹಾಗೂ "ಸರ್ವಾನ್ ಗುಣಾನ್" ಎನ್ನುವ ಶ್ರುತಿಗಳಂತೆ ಸರ್ವ ಟಣಗಳನ್ನು ಹೇಳುವ ಆತ್ಮಶಬ್ದವು ಅವರವರ ಯೋಗ್ಯತೆಗನುಸಾರ ಉಪಾನೀಯ.

**ದಾಸಸಾಹಿತ್ಯ :**

1. ಹರಿ, ಸಿರಿ, ವಿರಂಚಿ ಮುಖ ನಿ | ರ್ಜರ ಆವೇಶಾವತಾರಗಳ ।
   ಸ್ಮರಿಸು ಗುಣ ಗಣ ಸರ್ವ ಕಾಲದಿ ಭಕ್ತಿ ಪೂರ್ವಕದಿ ॥

2. ತಾರತಮ್ಯ ಜ್ಞಾನವಿಲ್ಲದೆ । ಸೂರಿಗಳ ನಿಂದಿಸುತ ನಿತ್ಯದಿ
   ತೋರುತಿಪ್ಪರು ಸುಜನರೋಪಾದಿಯಲಿ ನರರೊಳಗೆ ॥

3. ಸಾರ ಭಕ್ತಿ ಜ್ಞಾನದಿ ಬ್ರಹ ತಾರತಮ್ಯವನರಿತು ಪಠಿಸುವ
   ಸೂರಿಗಳಿಗನುದಿನದಿ ಪುರುಷಾರ್ಥಗಳ ಪೂರೈಸಿ
   ಕಾರುಣಿಕ ಮರುತಾಂತರಾತ್ಮಕ । ಮಾರಮಣ ಜಗನ್ನಾಥವಿಠಲ
   ತೋರಿ ಕೊಂಬನು ಹೃತ್ಕಮಲದೊಳು ಯೋಗ್ಯತೆಗಳನರಿತು ॥

(ಹರಿಕಥಾಮೃತಸಾರ)

## 14. ಸಂಭೃತ್ಯಧಿಕರಣ

**ಸೂತ್ರ :**

**1. ಓಂ ಸಂಭೃತಿದ್ಯುವ್ಯಾಪ್ತ್ಯಪಿ ಚಾತಃ ಓಂ || ೨೪ ||**

"ಉದ್ವಾಸ ದ್ಯಾವಾಪೃಥಿವೀ ಬಿಭರ್ತಿ . . ." ಎಂದದ್ದರಿಂದ ಸಂಯಕ್ ಭರಣವು ಪ್ರಕಾಶದಿಂದ ವ್ಯಾಪ್ತಿ, ಸರ್ವೋಪಾಸ್ಯಗಳಲ್ಲಿ, ಮುಕ್ತಿಯೋಗ್ಯರಾದ ದೇವ. ಮನುಷ್ಯಾದಿಗಳಿಗೆ ಆನಂದ ಮೊದಲಾದುವುಗಳು ಉಪಾಸ್ಯಗಳಾಗಿವೆ. ಅಯೋಗ್ಯ ವನ್ನು ಉಪಾಸನೆ ಮಾಡಿದರೆ ಅನರ್ಥಕಾರಿ.

**ದಾಸಸಾಹಿತ್ಯ :**

1. ದಿವಿಜ ದಾನವ ತಾರತಮ್ಯದ । ವಿವರ ತಿಳಿವ ಮಹಾತ್ಮರಿಗೆ ಬಾ ।
ಸ್ನ ವಿರಸಖ ತಾನೊಲಿದು ಉದ್ಧರಿಸುವನು ಭವದಿಂದ ॥

2. ಪ್ರಾಣದೇವನು ತ್ರಿವಿಧರೊಳಗ ಪ್ರ । ವೀಣ ತಾನೆಂದೆನಿಸಿ ಅಧಿಕಾ ।
ರಾನುಸಾರದಿ ಕರ್ಮಗಳ ತಾಮಾಡಿ ಮಾಡಿಸುವ ॥
ಜ್ಞಾನ ಭಕ್ತಿಸುರರ್ಗೆ ಮಿಶ್ರ । ಜ್ಞಾನ ಮಧ್ಯಮ ಜೀವರಿಗೆ ಅ ।
ಜ್ಞಾನ ಮೋಹ ದ್ವೇಷಗಳ ದೈತ್ಯರಿಗೆ ಕೊಡುತ್ತಿಪ್ಪ ॥

(ಹರಿಕಥಾಮೃತಸಾರ)

## 15. ಪುರುಷಾಧಿಕರಣ

**ಸೂತ್ರ :**

**1. ಓಂ ಪುರುಷ ವಿದ್ಯಾಯಾಮಪಿ ಚೇತರೇಷಾಮನಾ
ಮ್ನಾನಾತ್ ಓಂ || ೨೫ ||**

"ಸರ್ವತಃ ಪುರುಷೇ ಸೂಕ್ತೇಃ" ಎನ್ನುವ ಶ್ರುತಿಯಂತೆ ಸರ್ವವಿದ್ಯೆಯಿಂದ ಗುಣೋಪಸಂಹಾರವು ಕರ್ತವ್ಯ. ಆದ್ದರಿಂದ ಸರ್ವರಿಗೂ ಯಥಾಶಕ್ತಿ ಸರ್ವ ಪರಿ ಜ್ಞಾನವು ಯುಕ್ತವಾದುದು.

**ದಾಸಸಾಹಿತ್ಯ :-**

1. ಶ್ರೀರಮಣ ಸರ್ವೇಶ ಸರ್ವಗ । ಸಾರಭೋಕ್ತ ಸ್ವತಂತ್ರ ದೋಷ ವಿ ।
ದೂರ ಜ್ಞಾನಾನಂದ ಬಲ ಐಶ್ವರ್ಯ ಪರಿಪೂರ್ಣ ॥
ಮೂರು ಗುಣ ವರ್ಜಿತ ಸಗುಣ ಸಾ । ಕಾರ ವಿಶ್ವಸ್ಥಿತಿಲಯೋದಯ ।
ಕಾರಣ ಕೃಪಾಸಾಂದ್ರ ನರಹರೇ ಸಲಹೋ ಸಜ್ಜನರ ॥

2. ಒಂದ ಜಾಂಡದದೆದಳೊರದೆ ರೂಪ ಡೊ । ಳೊಂದವಯವದದೊಳೊಂದು ನಖ ದೊಳು ।

ಒಂದು ಗುಣಗಳ ಪಾರುಗಾಣದೆ ಕೃತ ಪುಟಾಂಜಲಿಯಿಂ ।
ನಂದಜಾಸನ ಪುಳಕ ಪುಳಕಾ । ನಂದ ಬಾಷ್ಪದ ತೊದಲ ನುಡಿಯಿಂ ।
ಎಂದರಾ ಪಲ್ಲಭನ ಮಹಿಮೆ ಗಭೀರತರವೆಂದ ॥

(ಹರಿಕಥಾಮೃತಸಾರ)

3. ಸತ್ಯ ಜಗಕಿದು ಪಂಚಭೇದವು ನಿತ್ಯ
ಶ್ರೀ ಗೋವಿಂದ ಕೃತ್ಯನ ತಿಳಿದು ತಾರತಮ್ಯದಿ
ಕೃಷ್ಣನಧಿಕೆಂದು ಸಾರಿರೈ.

(ಶ್ರೀಪುರಂದರದಾಸರು)

## 16. ವೇದಾಧಿಕರಣ

**ಸೂತ್ರ :-**

**1. ಓಂ ವೇಧಾದ್ಯ ರ್ಥ ಭೇದಾತ್ ಓಂ ॥ ೨೬ ॥**

"ತಂ ಪ್ರತ್ಯಂಚಮರ್ಚಿಷಾ ವಿದ್ಧ್ಯಮ ಮರ್ಮನ್ । ಅಗ್ನೇ ತ್ವಂಚ ಯಾತುಧಾನಾಸ್ಯ ಭಿಂಧಿ । ಪರಾಶ್ರಣೀಃ" ಎಂದು ಶ್ರುತವಾದ ವೇದಾದಿಗಳು ಫಲ ಬೇಧ ಪ್ರಯುಕ್ತ ಸರ್ವೋಪಾಸ್ಯಗಳಲ್ಲ. ಅಂದರೆ ದುಷ್ಟಜನ ಹಿಂಸಾದಿ ರೂಪವಾದ ವಿಲಕ್ಷಣ ಫಲವುಳ್ಳ ವೇದಾಧ್ಯುಪಾಸನವು ಯತ್ಯಾದಿಗಳಿಗೆ ಕೂಡುವುದಿಲ್ಲ.

**ದಾಸಸಾಹಿತ್ಯ :**

"ವೇದ ಓದಲು ಒಲಿದೆ ವಾದಮಾಡಲು ಹಾದಿಯಾವುದೋ ಭುಧರ ಪಾದ ನಬಲದೆ.

(ಶ್ರೀವ್ಯಾಸವಿಠಲರು)

## 17. ಹ್ಯಾನಾಧಿಕರಣ

**ಸೂತ್ರಗಳು :**

**1. ಓಂ ಹಾನೌ ತೂಪಾಯನ ಶಬ್ದ ಶೇಷತ್ವಾತ್ತು ಶಾಚ್ಛಂದಸ್ತುತ್ಯುಪಗಾನವತ್ತದುಕ್ತಂ ಓಂ ॥ ೨೭ ॥**

**2. ಓಂ ಸಾಂಪರಾಯೇ ತರ್ತವ್ಯಾಭಾವಾತ್ತಥಾಹ್ಯನ್ಯೇ ಓಂ ॥ ೨೮ ॥**

ಮುಕ್ತಿಯಲ್ಲಿ ಉಪಾಸನೆ ಉಂಟು, "ಮುಕ್ತಸ್ಯೋಪಾಸನಾ ಕರ್ತವ್ಯಾ ನವಾ । ಇತಿ ಅತೋಬ್ರವೀತಿ" ಎಂಬ ವಾಕ್ಯಾನುಸಾರ ಮುಕ್ತನಿಗೆ ಸ್ವೇಚ್ಛೆಯಿಂದಲೇ ಉಪಾಸನೆ ಕೂಡುತ್ತಿದೆ. ವಿಧಿಯಿಂದಲ್ಲ, "ಏತತ್ಸಾಮಗಾಯನ್ನಾಸ್ತೇ" ಇತ್ಯಾದಿ ಶ್ರುತಿಯಂತೆ.

**ದಾಸಸಾಹಿತ್ಯ :**

ನಿತ್ಯನಿರ್ಮಲ ನಿಗಮ ವೇದ್ಯೋ । ತ್ಪತ್ತಿ ಸ್ಥಿತಿಲಯದೂರವರ್ಜಿತ ।
ಸ್ತುತ್ಯ ಪೂಜ್ಯ ಪ್ರಸಿದ್ಧ ಮುಕ್ತಾ ಮುಕ್ತ ಗಣ ಸೇವ್ಯ ॥
ಸತ್ಯಕಾಮದ ಶರಣ್ಯ ಶಾಶ್ವತ ಭೃತ್ಯವತ್ಸಲ ಭಯನಿವಾರಣ
ಅತ್ಯಧಿಕ ಸಂಪ್ರೀಯತಮ ಜಗನ್ನಾಥ ಮಾಂಪಾಹಿ ॥

(ಹರಿಕಥಾಮೃತಸಾರ)

## 18. ಛಂದೋಽಧಿಕರಣ

**ಸೂತ್ರಗಳು :**

1. ಓಂ ಛಂದತ, ಉಭಯಾವಿರೋಧಾತ್ ಓಂ ॥ ೨೯ ॥
2. ಓಂ ಗತೇರರ್ಥವತ್ತ್ವಮುಭಯಥಾ ಅನ್ಯಥಾ ಹಿ ವಿರೋಧಃ ಓಂ ॥ ೩೦ ॥
3. ಓಂ ಉಪಪನ್ನಸ್ತಲ್ಲಕ್ಷಣಾರ್ಥೋಪಲಬ್ಧೇಃ, ಲೋಕವತ್ ಓಂ ॥ ೩೧ ॥

ಭಗವದ್ ಕರ್ಮದಲ್ಲಿ ಮುಕ್ತರಿಗೆಸಿಯಮಾಭಾವವನ್ನು ತಿಳಿಸುತ್ತಿದ್ದಾರೆ. ಮುಕ್ತರು ಸ್ವೇಚ್ಛೆಯಿಂದ, ವಿಧಿಪ್ರಾತ್ಯವಾಯಗಳಿಲ್ಲದೇ ತಾವಾಗಿ ಸತ್ಕರ್ಮ ನಿರತರಾಗುತ್ತಾರೆ. ಮಾಡಲೇಬೇಕೆಂಬ ನಿಯಮವಿಲ್ಲ.

**ದಾಸಸಾಹಿತ್ಯ :**

ನಿತ್ಯ ಮುಕ್ತಳೆ ನಿರ್ವಿಕಾರಳೆ । ನಿತ್ಯಸುಖಿ ಸಂಪೂರ್ಣ ನಿತ್ಯಾ
ನಿತ್ಯ ಜಗದಾಧಾರೆ ಮುಕ್ತಾಮುಕ್ತ ಗಣ ವಿನುತೆ ॥
ಚಿತ್ತಯಿಸು ಬಿನ್ನಪವ ಪುರುಷೋ
ತ್ತಮನ ವಕ್ಷೋನಿವಾಸಿನಿ ಭೃತ್ಯವತ್ಸಲೆ ಕಾಯೆ ತ್ರಿಜಗನ್ಮಾತೆ ವಿಖ್ಯಾತೆ ॥

(ಹರಿಕಥಾಮೃತಸಾರ)

## 19. ಅನಿಯಮಾಧಿಕರಣ

**ಸೂತ್ರ :**

**1. ಓಂ ಅನಿಯಮಃ ಸರ್ವೇಷಾಮವಿರೋಧಾತ್ ಶಬ್ದಾನು-
ಮಾನಾಭ್ಯಾಂ ಓಂ || ೩೨ ||**

ಉಪಾಸನೆಯಿಂದ ಬ್ರಹ್ಮಜ್ಞಾನ ಹೊಂದಿದವರಿಗೆಲ್ಲಾ ಮೋಕ್ಷವು ನಿಯಮಿತ-ವಾಗಿದೆ, "ಸರ್ವೇಗುಣಾಃ ಬ್ರಹ್ಮಣ್ಯೆವ" ಎಂಬುದರ ಅರ್ಥ ವಿವರ ಹೀಗಿದೆ ಉಪಾಸನೆಯಲ್ಲಿ ಶ್ರುತಿವಿರೋಧವಿದ್ದಂತೆ ಇಲ್ಲಿ ಶ್ರುತಿ ವಿರೋಧವಿಲ್ಲವಾದ್ದರಿಂದ ಜ್ಞಾನಿಗೆ ಮೋಕ್ಷ ಸಿದ್ಧಿ

**ದಾಸಸಾಹಿತ್ಯ :**

1. ನಿದುಃಖವಲ್ಲಿ ನಮರು ಸರ್ವಜೀವಿಗಳಿನ್ನು । ಮುರ್ಧವರ್ಪ ವಿಜಯವಿಠಲ ಗತಿ ಪ್ರದಾತ.

2. ಮುಕುತಿಯಾದವರ ಪ್ರಕರಣ ತಿಳಿವುದು ಭಕುತಿಯಿಂದಲಿ ಭಾವ ಶುದ್ಧನಾಗಿ ಮುಕುತರೊಳಗೆ ತಾರತಮ್ಯವುಂಟು . . . . . . . . . .
ಅಕುಟಿಲರಲ್ಲದ ಒಬ್ಬರೊಬ್ಬರಿಗೆ ಕು । ಹಕತನವಿಲ್ಲದ ಅಧೀನರಾಗಿಪ್ಪರು ।
ಮುಕುತಿದಾಯಕ ನಮ್ಮ ವಿಜಯವಿಠಲ ನಿಯಾಮಕ ಕಾಣೋ ಸರ್ವಜನಕೆ ಅನಂತ ಕಲ್ಪಕ್ಕೆ.

**(ಮುಕ್ತರ ತಾರತಮ್ಯ ಸುಳಾದಿ-ಶ್ರೀ ವಿಜಯದಾಸರು)**

## 20. ಯಾವದಧಿಕರಣ

**ಸೂತ್ರಗಳು :**

**1. ಓಂ ಯಾವದಧಿಕಾರಮವಸ್ಥಿತಿರಾಧಿಕಾರಿಕಾಣಾಂ ಓಂ || ೩೩ ||**

**2. ಓಂ ಅಕ್ಷರಧಿಯಾಂತ್ವವಿರೋಧಃ, ಸಾಮಾನ್ಯ
ತದ್ಭವಾಭ್ಯಾಮೌಪಸದವತ್ತದುಕ್ತಂ ಓಂ || ೩೪ ||**

ದೇವತೆಗಳಿಗೆ ಅಧಿಕಾರಾನುಸಾರ ಮುಕ್ತಿ, ಉಪಾಸಕರು ಯೋಗ್ಯತಾ ತಾರ-ತಮ್ಯವುಳ್ಳವರೆ ಆಗಿರುವರು. ಮೋಕ್ಷದಲ್ಲಿ ತಾರತಮ್ಯವಂಟು ಆದರೆ ಪರಸ್ಪರ ವಿರೋಧವಿಲ್ಲ.

**ದಾಸಸಾಹಿತ್ಯ :**

1. ಮುಕುತಿಯಾದವರ ಪ್ರಕರಣವ ತಿಳಿವುದು । ಭಕುತಿಯಿಂದಲಿ ಭಾವ ಶುದ್ಧನಾಗಿ । ಮುಕುತರೊಳಗೆ ತಾರತಮ್ಯವುಂಟು. ಅ । ಶಕುತರಾಗಿಪ್ಪರು ಹರಿ

ಪಾದದಿ । ಕಕುಲಾತಿ ಮೊದಲಾದ ದೋಷರೂಪಗಳ । ಅಕಟಕಟ ಇವರಾಲಿಂಗರಾದ ಸಕಲರೊಳಗೆ ಬ್ರಹ್ಮ ಉತ್ತಮ ದೇವತೆ . . . . ಅಕುಟಿರಲ್ಲದೆ ಒಬ್ಬೋಬ್ಬರಿಗೆ ಕು। ಹಕಶನವಿಲ್ಲದೆ ಅಧೀನರಾಗಿಪ್ಪರು । ಮುಕುತಿದಾಯಕ ನಮ್ಮ ವಿಜಯ ವಿಠಲ ನಿಯಾ । ಮಕ ಕಾಣೋ ಸರ್ವ ಜನಕೆ ಅನಂತ ಕಲ್ಪಕ್ಕೆ ॥

2. ಮೂರೊಂದು ವಿಧಮುಕುತಿಯ ಸಾಲೋಕ್ಯ । ಸಾರೂಪ್ಯ ಸಾಮೀಪ್ಯ ಮಣದೆ ಸಾಯುಜ್ಯ । ಸಾರ್ಷ್ಟಿವುಂಟು ಕಡೆಯಣ ಭೇದ . . . .

3. ತತ್ವೇಶರಿಗೆ ಉಂಟು ಚತುರ್ವಿಧ ಮುಕ್ತಿ ಮತ್ತು ಕ್ರಮದಿಂದ . . .

4. ಮನುಜ ಗಂಧರ್ವ ಮಿಕ್ಕಾದ ನಿರಂಶರಿಗೆ ಚಿನುಶರೀರಾದಿ ಚತುರ ಮುಕುತಿಯುಂಟು.

**(ವಿಸ್ತಾರವಾದ ಮುಕ್ತರ ತಾರತಮ್ಯ ಸುಳಾದಿ-ಶ್ರೀವಿಜಯದಾಸರು)**

## 21. ಇಯದಾಮನನಾಧಿಕರಣ

**ಸೂತ್ರಗಳು :**

1. ಓಂ ಇಯದಾಮನನಾತ್ ಓಂ || ೩೩ ||
2. ಓಂ ಅಂತರಾ ಭೂತಗ್ರಾಮವದಿತಿ ಚೇತ್, ತದುಕ್ತಂ ಓಂ|| ೩೬ ||
3. ಓಂ ಅನ್ಯಥಾ ಭೇದಾನುಪಪತ್ತಿರಿತಿ ಚೇನ್ನೋಪ ದೇಶವತ್ ಓಂ || ೩೭ ||

ಉಪಾಸಕಗೆ ಪ್ರಾಣನೇ ಅವಧಿಯು "ಪ್ರಾಣೋಪಾಪ" ಎನ್ನುವ ಶ್ರುತಿಯಂತೆ ಪ್ರಾಣನಿಗಿಂತ ಉತ್ತಮರಿಲ್ಲ ರಮಾ ಪರಮಾತ್ಮನ ಹೊರತು ಎಂದರಿಯಬೇಕು.

**ದಾಸಸಾಹಿತ್ಯ :–**

ವಾಯುವಿಗೆ ಸಮರಿಲ್ಲ ಜಗದೊಳು ವಾಯುದೇವರೆ ಬ್ರಹ್ಮರು. ವಾಯು ಬ್ರಹ್ಮಗೆ ಕೋಟಿಗುಣದಿಂದಧಿಕ ಶಕ್ತಳು ಶ್ರೀರಮಾ ಅನಂತ ಗುಣಗಳಿಂದ ಲಕುಮಿಗೆ ಅಧಿಕ ಪುರಂದರವಿಠಲನು ಘನಸಮರುಇವಗಿಲ್ಲ ಜಗದೊಳು ಹನುಮ ಹೃತ್‌ಪದ್ಮವಾಸಿಗೆ.

**(ಶ್ರೀ ಪುರಂದರದಾಸರು)**

## 22. ವ್ಯತಿಹಾರಾಧಿಕರಣ

**ಸೂತ್ರ :–**

1. ಓಂ ವ್ಯತಿಹಾರೋವಿಶಿಂಷಂತಿ ಹೀತರವತ್ ಓಂ || ೩೮ ||

ಪ್ರಾಣನಿಗಿಂತ ಪರಮಾತ್ಮ ಉತ್ತಮನು, "ಉತ್ತಮತ್ವಂ ಹಿ ದೇವಾನಾಂ" ಎಂಬ ಶ್ರುತಿಯಂತೆ ಪರಮಾತ್ಮನು ಪ್ರಾಣನಿಗಿಂತ ಉತ್ತಮ.

**ದಾಸಸಾಹಿತ್ಯ :**

ಪ್ರಾಣಪತಿ ಹೃದಯಾಬ್ಜ ಮಂಟಪಸ್ಥಾನದೊಳಗಭಿವ್ಯಾಪ್ತ ಚಿನ್ಮಯ ಧ್ಯಾನ ಗೋಚರನಾಗಿ ಕಣ್ಣಿಗೆ ಕಾಣಿಸುವ ಶ್ರೀರಂಗ ವಿಠಲ ಬಾರೋ ಮನೆಗೆ ಗೋವಿಂದ.

(ಶ್ರೀಪಾದರಾಜರು)

## 23. ಸತ್ಯಾದ್ಯಧಿಕರಣ

**ಸೂತ್ರ:**

**1. ಓಂ ಸೈವ ಹಿ ಸತ್ಯಾದಯಃ ಓಂ || ೩೯ ||**

ಪ್ರಾಣನಿಗಿಂತ ವಿಷ್ಣು ಒಬ್ಬನೇ ಉತ್ತಮ ಬಹುಮಂದಿ ಅಲ್ಲ.

**ದಾಸಸಾಹಿತ್ಯ :**

ಪ್ರಾಣನ ಪ್ರಾಣನ ಗುಣಗಣ ಮಂಡಿತ ವೇಣುಗೋಪಾಲವಿಠಲ ಕಲ್ಯಾಣನ ಕೃಷ್ಣನ ನೋಡಿದೆ ಸರ್ವೋತ್ಕೃಷ್ಟನ ಪಾಡಿದೆ.

(ಶ್ರೀ ವೇಣುಗೋಪಾವಿಠಲರು)

## 24. ಕಾಮಾಧಿಕರಣ

**ಸೂತ್ರಗಳು :**

**1. ಓಂ ಕಾಮಾದಿತರತ್ರ, ತತ್ರ ಚಾಯತನಾದಿಭ್ಯಃ ಓಂ || ೪೦ ||**

**2. ಓಂ ಆದರಾದಲೋಪಃ ಓಂ || ೪೧ ||**

**3. ಓಂ ಉಪಸ್ಥಿತೇಸ್ತದ್ವಚನಾತ್ ಓಂ || ೪೨ ||**

"ಸರ್ವಾಯತನಾ" ಇತ್ಯಾದಿ ಶ್ರುತಿಗಳಂತೆ ಲಕ್ಷ್ಮೀದೇವಿಯು ನಿತ್ಯ ಮುಕ್ತಳಾದ ಕಾರಣ ಶ್ರೀಹರಿಯು ಅತ್ಯಂತ ಸಾಮೀಪ್ಯವಾಸಿಯಾದ್ದರಿಂದ ಅಬದ್ಧಳು, ಆದರೂ ಸದಾ ಪರಮಾತ್ಮನನ್ನು ಉಪಾಸನೆ ತಾನಾಗಿ ಮಾಡುತ್ತಿರುತ್ತಾಳೆ. ಲಕ್ಷ್ಮಿಯು ಇತರ ರೂಪಗಳು ಪ್ರಾದುರ್ಭಾವಾದಿ ರೂಪಗಳೆಂದರಿಯಬೇಕು.

**ದಾಸಸಾಹಿತ್ಯ :**

ನಿತ್ಯ ಮುಕ್ತಳೆ ನಿರ್ವಿಕಾರಳೆ । ನಿತ್ಯ ಸುಖಿ ಸಂಪೂರ್ಣೆ ನಿತ್ಯಾ ।

ನಿತ್ಯ ಜಗದಾಧಾರೆ ಮುಕ್ತಾ ಮುಕ್ತ ಗಣವಿನುತೆ ॥

(ಹರಿಕಥಾಮೃತಸಾರ)

## 25. ತನ್ನಿರ್ಧಾರಣಾಧಿಕರಣ

**ಸೂತ್ರ :**

**1. ಓಂ ತನ್ನಿರ್ಧಾರಣಾನಿಯಮಸ್ತದ್ದೃಷ್ಟೇಃ**
**ಪೃಥಕ್ ಹಿ ಅಪ್ರತಿಬಂಧಃ ಫಲಂ ಓಂ ॥ ೪೨ ॥**

ಶ್ರವಣ ಮನನ ಧ್ಯಾನಾದಿ ಎಲ್ಲಾ ಉಪಾಸನೆಗಳನ್ನು ಮಾಡಲೇಬೇಕು.

**ದಾಸಸಾಹಿತ್ಯ :**

ಶ್ರವಣ ಮನನಕಾನಂದವೀವುದು । ಭವಜನಿತ ದುಃಖಗಳ ಕಳೆವುದು
ವಿವಿಧ ಭೋಗಗಳ ಪರಂಗಳಲಿತ್ತು ಸಲಹುವುದು ॥

ಭುವನ ಪಾವನವೆನಿಪ ಲಕುಮಿಯ । ಧವನ ಮಂಗಳ ಕಥೆಯು ಪರಮ ।
ಪ್ಲವದಿ ಕಿವಿಗೊಟ್ಟಾಲಿಪುದು ಭೂಸುರರು ದಿನದಿನದಿ ॥

(ಹರಿಕಥಾಮೃತಸಾರ)

## 26. ಪ್ರದಾನಾಧಿಕರಣ

**ಸೂತ್ರ :**

**1. ಓಂ ಪ್ರದಾನವದೇವ, ತದುಕ್ತಂ ಓಂ ॥ ೪೩ ॥**

"ಆಚಾರ್ಯವಾನ್ ಪುರುಷೋ ವೇದ" ಎನ್ನುವ ಶ್ರುತಿಯಂತೆ ಶ್ರವಣ, ಮನನ ನಿಧಿಧ್ಯಾಸನಾದಿಗಳು ಗುರೂಪದೇಶದಿಂದಲೇ ಬರಬೇಕು.

**ದಾಸಸಾಹಿತ್ಯ :**

ಗುರುವಿನ ಗುಲಾಮನಾಗುವತನಕ ದೊರೆಯದಣ್ಣ ಮುಕುತಿ ॥ ಪ ॥

(ಶ್ರೀಪುರಂದರದಾಸರು)

## 27. ಲಿಂಗಭೂಯಸ್ತ್ವಾಧಿಕರಣ

**ಸೂತ್ರ :-**

**1. ಓಂ ಲಿಂಗಭೂಯಸ್ತ್ವಾತ್ತದ್ಧಿ ಬಲೀಯಸ್ತದಪಿ ಓಂ ॥ ೪೪ ॥**

"ಗುರುಪ್ರಸಾದೋ ಬಲವಾನ್" ಎಂಬಂತೆ ಶ್ರವಣ ಮನನಾದಿಗಳಿಗಿಂತ ಗುರುಗಳ ಅನುಗ್ರಹ ಅತಿಶ್ರೇಷ್ಠವಾದುದು ಹಾಗೂ ಪ್ರಬಲವಾದುದು.

**ದಾಸಸಾಹಿತ್ಯ :**

ಗುರು ಭಕುತಿ ಪ್ರಧಾನ ಸಾಧನಾ । ಗುರುಶುಶ್ರೂಷೆಯೇ ಮಹಾಕರ್ಮನಾಶನಾ। ಗುರು ಉಪದೇಶವೇ ಜ್ಞಾನಮಾರ್ಗ । ಗುರು ಪ್ರಸಾದ ಲಿಂಗ ಭಂಗಕ್ಕೆ ಕಾರಣ । ಭಕುತಿ । ಗುರು ಪರಮಾನುಗ್ರಹ ಮಾಡಿದದಂ । ನಿರುಪ ಪಾರಾವಾರ ತತ್ವ ಪ್ರಮೇ-ಯ । ಕರತಳದೊಳಗಿದ್ದ ತೆರದಿಂ | ಅರುಹುವಾಗುವುದು ಮಾನವರಿಗೆ । ಸ್ವರೂಪ ಯೋಗ್ಯತಾದನಿತು ಗುರುಭಕುತಿ । ಗುರು ಒಲವಂದೆ ಇದ್ದಡಂ | ಧರೆ ಎಲ್ಲಾ ಗೆಲ್ಲ ವಕ್ಕು ಅವಾಗಂ । ಗುರು ಕರುಣ ಪಡೆದಡಂ ಧನ್ಯನೋ । ಗುರುಧ್ಯಾನಮಾಳ್ಪದು ಜನರಂ | ಗುರುಚರಣವೊಬ್ಬ ಭೃಂಗನಾಗೋ । ಗುರುಗಳಿಗೆ ಸರಿಗಾಣೆನೊ । ಗುರುವಲಿ ಹೊಡೆ ಸರ್ವವಿದ್ಯೆ ಪ್ರಾಪ್ತಿ | ಗುರುಮಂತ್ರ ಗುರೋರ್ಜಪ । ಗುರುನಾಮಸ್ಮರಣೆ । ಹಿರಿದಾಗಿ ಕೈಕೊಂಡು ಸುಖಿಸ ವುದು ಜನರು । ಗುರುಭವಾಂಭುಧಿ ದಾಟಿದನು ಸಿರಿ ವಿಜಯವಿಠಲ ರೇಯನು । ಗುರುವಿಲ್ಲದವನಿಗೆ ವೊಲಿಯನು

(ಶ್ರೀ ವಿಜಯದಾಸರು)

## 28. ವಿಕಲ್ಪಾಧಿಕರಣ

**ಸೂತ್ರಗಳು :**

**1. ಓಂ ಪೂರ್ವ ವಿಕಲ್ಪಃ ಪ್ರಕರಣಾತ್ಸ್ಯಾತ್ಕ್ರಿಯಾ-ಮಾನಸವತ್ ಓಂ || ೪೬ ||**

**2. ಓಂ ಅತಿದೇಶಾಚ್ಚ ಓಂ || ೪೭ ||**

ಪೂರ್ವಗುರುಗಳನ್ನು ಬಿಡಬಾರದೆಂದಲ್ಲಾ. ಉತ್ತಮ ಗುರುಗಳು ಲಭಿಸಿದಾಗ ಅವರ ಅಪ್ಪಣೆ ಪಡೆದೋ ಅಥವಾ ಹಾಗೆಯೇ ಅವರನ್ನು ಪಡೆಯಬಹುದು.

**ದಾಸಸಾಹಿತ್ಯ :–**

ಶತಕೋಟಿಗಾದರೂ ಉತ್ತಮ ಗುರು ಬೇಕು । ಸತತ ಗುರುಪತ್ನಿ ಗುರು ಪುತ್ರ ಮಿಗಿಲಾದ । ಹಿತದವರ ಸೇವೆ ಪ್ರೀತಿಯಿಂದಲಿ ಮಾಡೆ | ಚ್ಯುತವಾದ ವಿದ್ಯಾ ಪರಿ ಪೂರ್ಣವಾಗೋದು । ಕ್ಷಿತಿಯೊಳು ಉದ್ದಂಕವೆಂಬುವನ ನೋಡು । ಗತಲೋಚನನಾಗಿ ಅಲ್ಲಿಂದ ಗುರುವಿನಿಂದಲಿ ಮಹಾ । ಅತಿಶಯವಾದ ಭೇದ ವಿದ್ಯಾಕಲಿತನು । ಚತುರಾ ಮೂರುತಿ ನಮ್ಮ ವಿಜಯ ವಿಠಲರೇಯ ಪ್ರತಿ ಪ್ರತಿದಿನದಲ್ಲಿ ಜ್ಞಾನವ ಕೊಡುತಲಿಪ್ಪಾ ॥

(ಶ್ರೀ ವಿಜಯದಾಸರು)

## 29. ವಿಧ್ಯಾಧಿಕರಣ

**ಸೂತ್ರಗಳು :**

1. ಓಂ ವಿದ್ಯೈವತು ನಿರ್ಧಾರಣಾತ್ ಓಂ || ೪೮ ||

2. ಓಂ ದರ್ಶನಾಚ್ಚ ಓಂ || ೪೯ ||

"ನಾನ್ಯಃ ಪಂಥಾಃ" ಇತ್ಯಾದಿರೀತ್ಯ ಜ್ಞಾನವೇ ಮೋಕ್ಷಸಾಧನ ಕರ್ಮವಲ್ಲಾ ಅಪರೋಕ್ಷ ಜ್ಞಾನ ಸಂಪಾದನೆಗೆ ಶ್ರವಣ. ಮನನ, ನಿಧಿಧ್ಯಾಸನಾದಿಗಳನ್ನು ಮಾಡಲೇ ಬೇಕು.

**ದಾಸಸಾಹಿತ್ಯ :**

ಏನಾದರೇನು ಮೋಕ್ಷವಿಲ್ಲ ಜ್ಞಾನವಿಲ್ಲದೆ || ಪ ||

(ಶ್ರೀ ವಿಜಯದಾಸರು)

ಜ್ಞಾನಗಮ್ಯ ಕರುಣಾಸಿಧು ನಿನ್ನಡಿಗಾಶ್ರಯಿಸುವೆ ಪೊರೆ ಧೀನದಯಾಳು
ಶ್ರೀನಿಕೇತನ ಪಾಲಯಮಾಂ || ಪ ||

(ಶ್ರೀ ಜಗನ್ನಾಥದಾಸರು)

## 30. ಶ್ರುತ್ಯಧಿಕರಣ

**ಸೂತ್ರ :-**

1. ಓಂ ಶ್ರುತ್ಯಾದಿ ಬಲೀಯಸ್ತ್ವಾಚ್ಚ ನ ಬಾಧಃ ಓಂ || ೫೦ ||

ಜ್ಞಾನದಿಂದ ಮೋಕ್ಷ ಎಂಬ ವಚನವು ಕರ್ಮದಿಂದ ಮೋಕ್ಷ ಎಂಬ ವಚನ ದಿಂದ ಬಾಧಿತವಲ್ಲ. ಅಂದರೆ ಜ್ಞಾನವೇ ಮೋಕ್ಷಕ್ಕೆ ಮುಖ್ಯವಾದರೂ ಕರ್ಮಣೈವ ಎಂಬ ಸ್ಮೃತಿಯಂತೆ ಕರ್ಮವೂ ಕಾರಣವಾಗುತ್ತಿದೆ.

**ದಾಸಸಾಹಿತ್ಯ :-**

ಧ್ಯಾನದಿಂದಲಿ ಮನಸು ನಿಲಿಸಿ ಜ್ಞಾನವ ಪಡೆದು । ಆನಂದ ವಿಜಯ ವಿಠಲನ ಲೋಕವ ಸೇರೆಣೀ.

(ಶ್ರೀ ವಿಜಯದಾಸರು)

## 31. ಅನುಬಂಧಾಧಿಕರಣ

**ಸೂತ್ರ :-**

ಬ್ರಹ್ಮಜ್ಞಾನಕ್ಕೆ ಸಾಧನವಾದ ಉಪಾಸನವು ಭಕ್ತಿಪುರಸ್ಸರವಾಗಿಯೇ ಇರಬೇಕು

ಗುರುಪ್ರಸಾದ ಪೂರ್ವಕವಾದ ಅಭಿವ್ಯಕ್ತ ಭಕ್ತ್ಯಾದಿ ಗುಣಗಳಿಂದ ಯುಕ್ತವಾದ ಶ್ರವಣಾದಿಗಳಿಂದ ವಿಷ್ಣುವಿನ ದರ್ಶನವಾಗುವುದು.

**ದಾಸಸಾಹಿತ್ಯ :-**

ಭಕ್ತಿ ಬೇಕು ವಿರಕ್ತಿ ಬೇಕ || ಪ ||
ಶಕ್ತಿಬೇಕು ಮುಂದೆ | ಮುಕ್ತಿಯ ಬಯಸುವಗೆ || ಅ ||
ಜಪದಿ ಜಾಣುಮೆಯು ಬೇಕು । ತಪದಿ ಬಲವಿರಬೇಕು
ಉಪವಾಸ ವ್ರತ ಬೇಕು । ಉಪಶಾಂತಿ ಇರಬೇಕು || ೨ ||

(ಶ್ರೀ ಶ್ರೀಪಾದರಾಜರು)

## 32. ಪ್ರಜ್ಞಾಂತರಾಧಿಕರಣ

**ಸೂತ್ರ :-**

**1. ಓಂ ಪ್ರಜ್ಞಾಂತರ ಪೃಥಕ್ತ್ವವದ್ದೃಷ್ಟಿಶ್ಚ ತದುಕ್ತಂ ಓಂ || ೫೧ ||**

"ಅಂತರ್ದೃಷ್ಟಯಃ" ಇತ್ಯಾದಿ ಶ್ರುತಿಸಿದ್ಧ ಬ್ರಹ್ಮದರ್ಶನದಲ್ಲಿ ತಾರತಮ್ಯವಿದೆ ಎಂದು ನಿರೂಪಿತವಾಗಿದೆ.

**ದಾಸಸಾಹಿತ್ಯ :-**

ಎಂತೆಂತು ಬಿಂಬನ ಚಿಂತನೆ ಮಾಡಲು । ಅಂತಂತೆ ಬರುವನು ಪ್ರತಿಬಿಂಬಕ್ಕೆ ಸ್ವಾ । ತಂತ್ರ್ಯವೊಂದು ಮಾತ್ರಾ ಹೊರತಾಗಿ । ಚಿಂತಿಸಿನೋಡಲು ಜೀವ ಚಿದ್ರೂಪವನು । ಸಂತೋಷಾದಿಗಳೆಲ್ಲ ಹರಿಯಾಧೀನ ನಿ । ರಂತರ ಪರಾಧೀನ ಜೀವ ಸ್ವಾಮಿ । ಭೃತ್ಯ ನ್ಯಾಯವೆಂದು ಉಪಾಸನೆ ಎದುರಿಲಿ । ಚಿಂತಿಸಿ ಕರಮುಗಿದು ಚಿಂತನೆಮಾಡಲು। ಸಂತೋಷದಲಿ ಪ್ರಾಣದ್ವಾರ । ಚಿಂತಾಯಕ ತಂತ್ರ ಮೂರ್ತಿ ತೋರಿ ಭವ । ಗ್ರಂಥಿಯ ಹರಿಸುವ ತಡವಿಲ್ಲದೆ । ಶಾಂತ ಮೂರುತಿ ನಮ್ಮ ಗೋಪಾಲವಿಠಲ । ನಿಂತಲ್ಲೆ-ನಿಧಾನವಾಗಿ ಉಣಿಸುವಾ.

2. ಚಲ ಅಚಲಗಳಲಿ ಈಪರಿಧೇನಿಸೆ । ಒಲಿವ ಗೋಪಾಲವಿಠಲ ಇವಗೆ ಕರುಣದಲಿ.

(ಶ್ರೀಗೋಪಾಲದಾಸರು)

## 33. ನ ಸಾಮಾನ್ಯಾಧಿಕರಣ

**ಸೂತ್ರ :-**

**1. ಓಂ ನ ಸಾಮಾನ್ಯಾದಪ್ಯುಪಲಬ್ಧೇರ್ಮೃತ್ಯುವನ್ನ ಹಿ ಓಂ || ೫೨ ||**

**ಲೋಕಾಪತ್ತೀಃ ಓಂ** || ೩೩ ||

ಉಪಾಸನಾ ಸಾಧ್ಯವಾದ ಬಿಂಬ ವಿಷಯಕವಾದ ಅಪರೋಕ್ಷ ಜ್ಞಾನವೆ ಮೋಕ್ಷಕ್ಕೆ ಸಾಧನವಾದದ್ದು, ಬಿಂಬಾಪರೋಕ್ಷದಿಂದಲೇ ಮುಕ್ತಿ ಸ್ವಯೋಗ್ಯ ಭಗವದ್‌ರೂಪ ವಿಷಯಕವಾದ ಅಪರೋಕ್ಷದಿಂದಲೇ ಮುಕ್ತಿ ಇತರದರಿಂದಲ್ಲ.

**ದಾಸಸಾಹಿತ್ಯ :-**

1. ಎನ್ನ ಬಿಂಬಮೂರುತಿಯ ಪೂಜಿಪೆನು ನ ನು . . . .

2. ಅಂಬುಜ ಸಂಭವನು ಬಿಂಬದರುಶನ ಕಾಂಬನು ಮನದಿಚ್ಛೆ । ಅಂಬರ ನದಿ ಧರನು ಬಿಂಬ ದರ್ಪಣದಿ । ಕಾಂಬನು ಪ್ರತಿಬಿಂಬ ಅಂಬರ ಸಂಚರರು ಅಂಬುಜ ಸಖನಂತೆ ಬಿಂಬ ಕಾಂಬುವರು । ಎಂಬ ಮಾನುಷ್ಯರು ಅಂಬುದ ಮಿಂಚಿವೆಂಬಂತೆ । ಬಿಂಬ ಕಾಬರು ಸಿದ್ಧ ನಂಬಿದೇನೆ ಹೀ । ತಾಂಬರ ಅವರಿಗೆಂಬೋದು ಯೆನಗುಂಟೆ । ಡಂಭಕ ಭಕ್ತಿಗೆ ಸಂಭವನಾವು ವಿಜಯ ವಿಠಲ ಡೊಂಬನ ಅರಿತು ನಂಬಿಗೆ **ನೀಯೋ॥**

**(ಸುಳಾದಿ -ಶ್ರೀ ವಿಜಯದಾಸರು)**

## 34. ಪರೇಣಾಧಿಕರಣ

**ಸೂತ್ರ :**

**1. ಓಂ ಪರೇಣ ಚ, ಶಬ್ದಸ್ಯ ತಾದ್ವಿಧ್ಯಂ ಭೂಯಸ್ತ್ವಾ-**
**ತ್ತ್ವನುಬಂಧಃ ಓಂ** || ೩೪ ||

ಭಕ್ತಿಗೆ ಅಪರೋಕ್ಷಜ್ಞಾನ ಹುಟ್ಟಿಸುವುದರಲ್ಲಿ ಸ್ವಾತಂತ್ರ್ಯವನ್ನು ನಿರಾಕರಿಸುತ್ತಾರೆ. "ಭಕ್ತರೇವೈನಂದರ್ಶಯತಿ" ಎಂದಿರುವುದರಿಂದ ಭಕ್ತಿ ಪರಬ್ರಹ್ಮದತ್ತವಾದದ್ದು ಅಪರೋಕ್ಷಜ್ಞಾನಿಯಾದ ಪುರುಷನು ಭಕ್ತಿ ವಶನಾಗಿರುತ್ತಾನೆ.

**ದಾಸಸಾಹಿತ್ಯ :-**

ಭಕುತಿ ಪಾಲಿಸು ಜೀಯಾ. ಮುಂದೆ || ಪ ||
ಮುಕುತಿ ಗೊಡಪೆಯಾಕೆ ನೀನೊಲಿದ ಮೇಲೆ || ಅ ||
ಶ್ರವಣ ಮನನ ಧ್ಯಾನವೀಯೋ, ಎನ್ನ
ಅವಗುಣಗಳೆಣಿಸದೆ ಕರುಣಾಳು ಕಾಯೊ
ಅವಸಾನದಲಿ ನೀನೆ ಗತಿಯೊ, ಶ್ರೀ
ಭುವನೇಶ ವಿಜಯ ವಿಠಲ ನೀ ದೊರೆಯು

**(ಶ್ರೀ ವಿಜಯದಾಸರು)**

## 35. ಏಕಾಧಿಕರಣ

**ಸೂತ್ರಗಳು :-**

**1. ಓಂ ಏಕಃ, ಆತ್ಮನಃ ಶರೀರೇ ಭಾವಾತ್ ಓಂ || ೫೫ ||**

**2. ಓಂ ವ್ಯತಿರೇಕಃ ತದ್ಭಾವಭಾವಿತ್ವಾತ್, ನ ತೂಪಲಬ್ಧಿವತ್ ಓಂ || ೫೬ ||**

ಉಪಾಸನೆಗೆ ಅನಾದಿ ಯೋಗ್ಯತಾಪೇಕ್ಷೆ ಅವಶ್ಯಕ. ಅಂಶಿ ಅಂಶಾದಿಗಳ ಅಭೇದ ದ್ದಿಂದ ಅರ್ಜುನ ಇಂದ್ರಾಂಶನಾಗಿ ಯೋಗ್ಯತೆ ಸಂಪಾದಿಸಿದ್ದನೆಂಬು ಕೂಡುತ್ತದೆ.

**ದಾಸಸಾಹಿತ್ಯ :**

ಅಂಶಿ ಅಂಶಾಪೇಧಿಷ್ಠಾನ । ಅಂತರ್ಯಾಮಿಗಳ । ಸಂಶಯರಹಿತದಿ ರೂಪಗಳ ತಿಳಿದು । ಕ್ರೋಧಾದಿಗಳಳಿದು । ಕಂಸಾರಿಯು ಕರುಣದ ಬಲಿಸೂಟ । ಹಿಂಸೆಗಳೀಡ್ಯಾಡಿ । ಹಂಸೋಪಾಸಕನಾಗೋ ತನಕ । ಹೇಪ್ರಾಣಿ ನಿನ್ನ ಭ್ರಾಂತಿ ಬಿಡದೋ ಭಾಗ್ಯಪುರುಷಾಸೆ.

(ಶ್ರೀಗೋಪಾಲದಾಸರು)

## 36. ಅಂಗಾವಬದ್ಧಾಧಿಕರಣ

**ಸೂತ್ರಗಳು :**

**1. ಓಂ ಅಂಗಾವಬದ್ಧಾಸ್ತು ನ ಶಾಖಾಸು ಹಿ ಪ್ರತಿವೇದಂ ಓಂ || ೫೭ ||**

**2. ಓಂ ಮಂತ್ರಾದಿವದ್ವಾ ಅವಿರೋಧಃ ಓಂ || ೫೮ ||**

"ತಪೋವೈ ಕಿಂ ಜಾನತ" ಇತ್ಯಾದಿ ಶ್ರುತಿಯಂತೆ ಅಧಮರ ಗುಣಗಳನ್ನು ಉತ್ತಮರಲ್ಲಿ ಉಪಸಂಹಾರ ಮಾಡಬಹುದು, ಪರಿವಾರ ದೇವತೆಗಳ ಉಪಾಸನೆ ಮಾಡಲೇಬೇಕು. ಉತ್ತಮರ ಗುಣಗಳನ್ನು ಅಧಮರಲ್ಲಿ ಉಪಸಂಹಾರ ಮಾಡಬಾರದು ಮತ್ತು ಅಂಗದೇವತೋಪಾಸನೆಯನ್ನು ಫಲವಿಶೇಷಕ್ಕಾಗಿ ಉತ್ತಮಾಧಿಕಾರಿಗಳೇ ಮಾಡಬೇಕು ಸರ್ವರೂ ಅಲ್ಲ. "ಉಪಾಸನಾಂಗ ದೇವತಾನಾಂ" ಇತ್ಯಾದಿ ಶ್ರುತಿಯಂತೆ. || ೮ ||

**ದಾಸಸಾಹಿತ್ಯ :-**

1. ಸತತ ಗಣನಾಥ ಸಿದ್ಧಿಯ ನೀವ ಕಾರ್ಯದಲಿ । ಮತಿ ಪ್ರೇರಿಸುವಳು ಪಾರ್ವತಾದೇವಿ ಮು । ಕುತಿ ಪಥಕೆ ಮನಹೀವ ಮಹರುದ್ರದೇವರು ಹರಿ ಭ । ಕುತಿ ದಾಯಕಳು ಭಾರತೀದೇವಿ ಯು। ಕುತಿ ಶಾಸ್ತ್ರಗಳಲ್ಲಿ ವನಜ ಸಂಭವನರಸಿ । ಸತ್ಕರ್ಮಗಳ ನಡೆಸಿ ಸುಚಿಜ್ಞಾನ ಚಿಕಿತಿ ಇತ್ತು । ಗತಿಪಾಲಿಸುವ ನಮ್ಮ ಪವಮಾನನು ॥ ಚಿತ್ತದಲಿ

ಆನಂದ ಸುಖವನೀವಳು ರಮಾ । ಭಕುತ ಜನರೊಡೆಯ ನಮ್ಮ ಪುರಂದರವಿಠಲನು ।
ಸತತ ಇವರಲಿ ನಿಂತು ಈಕ್ಷಿತಿಯ ನಡೆಸುವನು.

(ಶ್ರೀಪುರಂದರದಾಸರು)

2. ಪಾಕಶಾಸನ ಮುಖ್ಯ ಸಕಲದಿ । ವಾಕಸರಿಗಭಿವಮಿಪೆ ಋಷಿಗಳಿಗೆ ।
ಏಕೆ ಚಿತ್ತದಿ ಪಿತೃಗಳಿಗೆ ಗಂಧರ್ವ ಕ್ಷಿತಿಪರಿಗೆ ॥
ಆ ಕಮಲನಾಭಾದಿ ಯತಿಗಳ । ನೀಕಕಾನವರಿಸುವೆನು ಬಿಡದೆ ರ ।
ಮಾಕಳತ್ರನ ದಾಸವರ್ಗಕೆ ನಮಿಪೆ ನವವರತ ॥

(ಹರಿಕಥಾಮೃತಸಾರ)

## 37. ಭೂಮಾ ಕರಣ

ಸೂತ್ರ :

1. ಓಂ ಭೂಮ್ನಃ ಕ್ರತುವ ಜ್ಜ್ಯಾಯ ಸ್ತ್ವಂ,
ತಥಾ ಚ ದರ್ಶಯತಿ ಓಂ ॥ ೫೯ ॥

"ಭೂಮ್ಯೈವಪದೇಷಃ" ಎಂಬ ಶ್ರುತಿಯಂತೆ ಭೂಮಾತ್ವೋಪಾಸನವು ಸರ್ವರಿಗೂ ಔಪಾಸ್ಯವಾಗಿದೆ. (ಸರ್ವರಿಗೂ ಅವ್ಯಕವಾದದ್ದು)

ದಾಸಸಾಹಿತ್ಯ :-

ಪುರುಷ ರೂಪತ್ರಯ ಪುರಾಣ ' ಪುರುಷ ಪುರುಷೋತ್ತಮ ಕ್ಷರಾಕ್ಷರ ।
ಪುರುಷ ಪೂಜಿಪಪಾದ ಪೂರ್ಣಾನಂದ ಜ್ಞಾನಮಯ ॥
ಪುರುಷಸೂಕ್ತ ಸುಮೇಯ । ತತ್ತ । ತ್ಪುರುಷರ ನಿಲಯ ಮಹ ॥
ಪುರುಷ ಜಾಂಡಾಂತರಬ ಬಹಿರದಿ ವ್ಯಾಪ್ತ ನಿರ್ಲಿಪ್ತ ॥

(ಹರಿಕಥಾಮೃತಸಾರ)

ವಿಶೇಷಸೂಚನೆ :-

"ತಥ್ಯೈವ ದೇಪಃ ಪರಮೋಪ್ಯುಪಾಸ್ಯಃ" ಎನ್ನುವ ಶ್ರುತಿಯಂತೆ ಜ್ಞಾನ, ಆನಂದ ಮೊದಲಾದ ಗುಣಗಳಲ್ಲಿ ಎಲ್ಲಾ ಭೂಮ್ಯತ್ವವು ಒಟ್ಟಿಗ ಇದ್ದ ಪ್ರಯುಕ್ತ ಹಾಗೆ ಉಪಾಸನೆ ಮಾಡಿದರೇನೇ ಫಲಸಿದ್ಧಿ.

## 38. ನಾನಾಶಬ್ದಾಧಿಕರಣ

ಸೂತ್ರ :-

1. ಓಂ ನಾನಾ ಶಬ್ದಾದಿಭೇದಾತ್ ಓಂ ॥ ೬೦ ॥

ಭೂಮಗುಣೋಪಾಸನೆಯಲ್ಲಿ ಅಧಿಕಾರಿಗಳಿಗೆ ತಾರತಮ್ಯ ಅನುಸರಿಸಿ ಉಪಾಸನ ಯನ್ನು ಹೇಳುತ್ತದೆ.

**ದಾಸಸಾಹಿತ್ಯ :-**

ದೇವ ಮಾನವ ದಾನವರು ಎಂ ।ದೀ ವಿಧದಲಾವಾಗಲಿಪ್ಪರು ।
ಮೂವರೊಳಗಾವಗಿಲ್ಲ ಸ್ನೇಹೋದಾಸೀನ ದ್ವೇಷ ।
ಜೀವರಧಿಕಾರಾನುಸಾರದ । ಲೀವ ಸುಖ ಸಂಸಾರ ದುಃಖವ
ತಾವುಣದ ಲವರವರಿ ಗುಣಿಸುವ ನಿರ್ಗತಾಶವನು.

(ಹರಿಕಥಾಮೃತಸಾರ)

## 39. ವಿಕಲ್ಪಾಧಿಕರಣ

**ಸೂತ್ರ :-**

**1. ಓಂ ವಿಕಲ್ಪೋ, ವಿಶಿಷ್ಟಫಲತ್ವಾತ್ ಓಂ || ೬೧ ||**

ಸ್ವಯೋಗ್ಯ ರೂಪ ವಿಷಯಕವಾದ ಉಪಾಸನೆಯನ್ನು ಮಾಡಲೇಬೇಕು. ಅನ್ಯ ರೂಪೋಪಾಸನಾ ಮೋಕ್ಷಾದಿ ಪುರುಷಾರ್ಥ ಸಾಧನೆಗೆ ಐಚ್ಛಿಕವಾದದ್ದು.

**ದಾಸಸಾಹಿತ್ಯ:-**

ಆವಜೀವರೊಳಿದ್ದರೇ ನಿ । ನ್ನಾವಕರ್ಮ ಮಾಡಲೇನಿ ।
ನ್ನಾವ ಗುಣರೂಪಗಳು ಪಾಸನೆ ಮಾಡಲೇನವರು॥
ಕಾವನಯ್ಯನ ಪರಮ ಸತ್ಕರು । ಣಾವಲೋಕನ ಬಲದಿ ಚರಿಸುವ ।
ದೇವತೆಗಳನು ಮುಟ್ಟಲಾಪವೆ ಪಾಪ ಕರ್ಮಗಳು ॥

(ಹರಿಕಥಾಮೃತಸಾರ)

## 40. ಕಾಮಾಧಿಕರಣ

**ಸೂತ್ರ :**

**1. ಓಂ ಕಾಮ್ಯಾಸ್ತು ಯಥಾಕಾಮಂ ಸಮುಚ್ಚೀಯೇರನ್ನ
ವಾ, ಪೂರ್ವಹೇತ್ವಭಾವಾತ್ ಓಂ || ೬೨ ||**

ಭಗವದುಪಾಸನೆಗೆ ಜ್ಞಾನಸಾಧನವೇ ಅತ್ಯಾವಶ್ಯಕವಾದದ್ದು ಕಾಮಸಾಧನ ವಲ್ಲ. "ಸಕಾಮೇಭ್ಯೋಃ ಮಿತಗುಣಾಃ" ಎಂದಿರೋಣದರಿಂದ ಕಾಮೋಪಾಸನೆಯು ಭಗವದ್ ಪ್ರಸಾದಕ್ಕಾಗಿ ಆದರೆ ಕೂಡುತ್ತಿದೆ.

ದಾಸಸಾಹಿತ್ಯ :

ಏನುಮಾಡಿದರೇನು ಜ್ಞಾನವಿಲ್ಲದಲೆ ॥ ಪ ॥
ಆನೆಗೆ ಮಜ್ಜನವ ಮಾಡಿಸಿದ ತೆರದಿ ॥ ಅ ॥

ವೇದ ಓದಿದರೇನು ಶಾಸ್ತ್ರಪಠಿಸಿದರೇನು ?
ವಾಧಿಸಿದರೇನು ತರ್ಕವ ಮಾಡಿ
ಪಾದದಿ ಗಂಗೆಯನು ಪಡೆದ ನಾರಾಯಣನೆ
ಆದಿ ಎನ್ನುತ ಪಂಚಭೇಧವನು ಅರಿಯದಿರೆ ॥ ೧ ॥

ಹದ್ದಿನಂದದಿ ಬಹುಕಾಲ ಬಾಳಿದರೇನು
ಸದ್ಧರ್ಮ ಕರ್ಮವನು ಜರಿದು ನಿತ್ಯಾ
ಮಧ್ವ[illegible]ಭ ಸಸ್ನು ಪೋಷಣವಿತಲು
ಪದ್ಮಪಾದ ನಿತ್ಯ ಪೊಂಡಕೊಂಡಿರದೆ ॥ ೨ ॥

## 41. ಅಂಗಾಧಿಕರಣ

ಸೂತ್ರಗಳು :-

1. ಓಂ ಅಂಗೇಷು ಯಥಾ ಆಶ್ರಯಭಾವಃ ಓಂ ॥ ೬೩ ॥
2. ಓಂ ಶಿಷ್ಟೇಶ್ಚ ಓಂ ॥ ೬೪ ॥
3. ಓಂ ಸಮಾಹಾರಾತ್ ಓಂ ॥ ೬೫ ॥
4. ಓಂ ಗುಣಸಾಧಾರಣ್ಯಶ್ರುತೇಶ್ಚ ಓಂ ॥ ೬೬ ॥

(ದೇವತೆಗಳ ಉಪಾಸನಾ ಸುಳಾ[illegible]-(ಶ್ರೀ ವಿಜಯದಾಸರು)

ಬ್ರಹ್ಮಾದಿ ದೇವತೆಗಳು ಭಗವದಂಗಾಶ್ರಿತರೆಂದು ದೇವತೆಗಳು ಮಾತ್ರಾ ಉಪಾಸನೆ ಮಾಡಬೇಕು. "ಚಕ್ಷೋಃ ಸೂರ್ಯೋ ಅಜಾಯತಾ" ಎಂಬಂತೆ ಸೂರ್ಯಾದಿ ದೇವತೆಗಳಿಗೆ ಭಗವದಂಗದಲ್ಲಿ ಹೇಗ ಆಶ್ರಯ ಹೇಳಲ್ಪಟ್ಟಿದೆಯೋ ಹಾಗೆ ಆಯಾ ದೇವತೆಗಳಿಗೆ ಆಶ್ರಯಉಳ್ಳ ಅಂಗದವನೆಂದು ಶ್ರೀಹರಿಯನ್ನು ಉಪಾಸನೆ ಮಾಡಬೇಕು. ಭಗವದಂಗದಲ್ಲಿ ಸೂರ್ಯಾದಿಗಳನ್ನು ಉಪಾಸನೆ ಮಾಡಬೇಕು, ಇದಕ್ಕೆ ದೇವತೆಗಳೇ ಪಾತ್ರರು.

ದಾಸಸಾಹಿತ್ಯ :-

ಧಾರಣ ಧ್ಯಾನಯೋಗ ಮಾಡು ಮನವೆ ಆಸಾ । ಧಾರಣ ಹರಿಯ ಮಹಿಮೆ ಪೂರ್ಣ ತಿಳಿದು । ತಾರತಮ್ಯಾನುಸಾರ ಸಾತ್ವೀಕ ಜನರ ವಿ । ಸ್ತಾರವಾದ ರೂಪಾಂ-ತರವ ಗ್ರಹಿಸಿ ॥ . . . . . .

ಓಂದಾರಂಭಿಸಿ ಕೊಂಡು ಹದಿನಾರು ಪರ್ಯಂತ । ನಂದಾ ಧ್ಯಾನವು ಮಾಡು ವಿಜಯವಿಠಲ ಹಂಯಿ.

(ದೇವತೆಗಳ ಉಪಾಸನಾ ಸುಳಾದಿ-ಶ್ರೀ ವಿಜಯದಾಸರು)

## 42. ನ ವಾಧಿಕರಣ

**ಸೂತ್ರಗಳು :-**

1. ಓಂ ನ ವಾ ಅತತ್ಸಹಭಾವಶ್ರುತೇಃ ಓಂ || ೩೭ ||

2. ಓಂ ದರ್ಶನಾಚ್ಚ ಓಂ || ೩೮ ||

ಶ್ರೀಹರಿಯ ಅಂಗದಲ್ಲಿ ಸೂರ್ಯಾದಿಗಳ ಉಪಾಸನೆ ಮಾಡಕೂಡದ "ಸತ್ಯೋ ಜ್ಞಾನಃ" ಇತ್ಯಾದಿ ಶ್ರುತಿಗಳಂತೆ ಅಂಗದೇವತೋಪಾಸನೆಯನ್ನು ಮಾಡುವ ಅಧಿಕಾರ ದೇವತೆಗಳಿಗೆ ಮಾತ್ರಾ ಇತರರಿಗಲ್ಲ.

**ದಾಸಸಾಹಿತ್ಯ :**

1. ಸತ್ಯ ಜಗಕಿದು ಪಂಚಭೇಧವು ನಿತ್ಯ ಶ್ರೀಗೋವಿಂದನಾ ಕೃತ್ಯ ತಿಳಿದು ತಾರತಮ್ಯದಿ ಕೃಷ್ಣನಧಿಕೆಂದು ಸಾರಿರೈ.

2. ಆವರವರ ಯೋಗ್ಯತೆಯನರಿತು, ಅವರಿಂದ ಪೂಜೆಗೊಂಡು ಅವರಿಗೊಲಿವ ನಮ್ಮ ಪುರಂದರವಿಠಲ ತವದಯವೇ ಸಾಧನವು.

(ಶ್ರೀ ಪುರಂದರದಾಸರು)

—o—o—o—

## ತೃತೀಯಾಧ್ಯಾಯ ಚತುರ್ಥಪಾದ

### 1. ಪುರುಷಾರ್ಥಾಧಿಕರಣ

**ಸೂತ್ರಗಳು :**

1. ಓಂ ಪುರುಷಾರ್ಥೋಽತಃ ಶಬ್ದಾದಿತಿ ಬಾದರಾಯಣಃ ಓಂ || ೧ ||
2. ಓಂ ಶೇಷತ್ವಾತ್ಪುರುಷಾರ್ಥವಾದೋಯಥಾನ್ಯೇಷು, ಇತಿ ಜೈಮಿನಿಃ ಓಂ || ೨ ||
3. ಓಂ ಆಚಾರದರ್ಶನಾತ್ ಓಂ || ೩ ||
4. ಓಂ ತಚ್ಛ್ರುತೇಃ ಓಂ || ೪ ||
5. ಓಂ ಸಮನ್ವಾರಂಭಣಾತ್ ಓಂ || ೫ ||
6. ಓಂ ತದ್ವತೋ ವಿಧಾನಾತ್ ಓಂ || ೬ ||
7. ಓಂ ನಿಯಮಾಚ್ಚ ಓಂ || ೭ ||
8. ಓಂ ಅಧಿಕೋಪದೇಶಾತ್ತು ಬಾದರಾಯಣಸ್ಯೈವಂ ತದ್ದರ್ಶನಾತ್ ಓಂ || ೮ ||
9. ಓಂ ತುಲ್ಯಂ ತು ದರ್ಶನಂ ಓಂ || ೯ ||

ಸರ್ವ ಪುರುಷಾರ್ಥವೂ ಜ್ಞಾನದಿಂದಲೇ ಆಗುತ್ತಿದೆ. ಸ್ವರ್ಗಾದಿಗಳ ಪ್ರಾಪ್ತಿಗೆ ಕರ್ಮವೇ ಸಾಕು. "ಯಜ್ಞೇನ ಯಜ್ಞಮಯಂತ" ಇತ್ಯಾದಿರೀತ್ಯ ಕರ್ಮಾನುಷ್ಠಾನ ಕಂಡು ಬಂದಿದ್ದರಿಂದ ಕರ್ಮದಿಂದ ಸರ್ವಪುರುಷಾರ್ಥ ಪ್ರಾಪ್ತಿ ಇಲ್ಲ. ಹಾಗಾದರೆ ಕರ್ಮ ವ್ಯರ್ಥವೇ ಅಂದರೆ ಕರ್ಮವು ಜ್ಞಾನಕ್ಕೆ ಅಧೀನವಾಗಿರಬೇಕು. ಆದಕ್ಕೆ ಜ್ಞಾನದ ಸಮಾನಸ್ಥಾನ ಕೊಡುವುದಿಲ್ಲ. ಜ್ಞಾನಯುಕ್ತ ಕರ್ಮ ಜ್ಞಾನಿಗೂ ಬೇಕು. ಆದರೆ ಅದು ಕಷ್ಟಾಯ "ಜ್ಞಾನೇನಾಧಿಕ್ಯಂ" ಎಂಬುದೇ ಮುಖ್ಯ.

**ದಾಸಸಾಹಿತ್ಯ :–**

1. ಏನಾದರೇನು ಮೋಕ್ಷವಿಲ್ಲ ಜ್ಞಾನವಿಲ್ಲದೆ || ಪ ||
ವೇದ ಓದಿದರೇನು ಶಾಸ್ತ್ರನೋಡಿದರೇನು
ಕಾದಿ ಕಾದಾಡಿ ಗೆದ್ದರೇನು, ಜ್ಞಾನವಿಲ್ಲದೆ || ೧ ||

ಕಾಶಿಗೆ ಹೋದರೇನು, ಕಾನನ ಸೇರಿದರೇನು
ಕಾಶಿ ಪೀತಾಂಬರ ಉಟ್ಟರೇನು. ಜ್ಞಾನವಿಲ್ಲದೆ || ೨ ||

ಜಪತಪಮಾಡಲೇನು, ಜಾಣತನದಿ ಮೆರೆದರೇನು
ವಿಜಯವಿಠಲನ್ನ ಸಾರಿದರೇನು, ಜ್ಞಾನವಿಲ್ಲದೆ ॥ ೩ ॥

2. ಏನುಮಾಡಿದರೇನು ಜ್ಞಾನವಿಲ್ಲದೆ ॥ ಪ ॥
ಆನೆಗೆ ಮಜ್ಜನವನು ಮಾಡಿಸಿದ ತರದಿ ॥ ಅ ॥

ಯಾತ್ರೆಯಮಾಡಿದರೇನು ತೀರ್ಥ ಮಿಂದರೇನು
ಪಾತ್ರನೆನಿಸಿದರೇನು ಡಂಭದಿಂದ
ಗಾತ್ರವ ಬಳಲಿಸಿ ಯಜ್ಞಮಾಡಿ ಅಗ್ನಿ
ಹೋತ್ರವಿಟ್ಟರೇನು ಹರಿಮಹಿಮೆ ತಿಳಿಯದಿರೆ ॥ ೨ ॥

(ಶ್ರೀ ಮೋಹನದಾಸರು)

## 2. ಅಸಾವತ್ರಿಕಾಧಿಕರಣ

**ಸೂತ್ರಗಳು :**

**1. ಓಂಅಸಾರ್ವತ್ರಿಕೀ ಓಂ** ॥ ೧೦ ॥

**2. ಓಂ ವಿಭಾಗಃ ಶತವತ್ ಓಂ** ॥ ೧೧ ॥

**3. ಓಂ ಅಧ್ಯಯನ ಮಾತ್ರವತಃ ಓಂ** ॥ ೧೨ ॥

ಸರ್ವರಿಗೂ ಜ್ಞಾನದಲ್ಲಿ ಅಧಿಕಾರವಿಲ್ಲ. ವೇದಾಧ್ಯಯನ ಉಳ್ಳವರಿಗೇನೆ ಜ್ಞಾನಾಧಿಕಾರತ್ವ ಸಿದ್ಧಿ. ಅವೈಷ್ಣವನಿಗೆ, ಭಕ್ತಿ ಇಲ್ಲದವನಿಗೆ, ಗುರುಭಕ್ತಿ ಇಲ್ಲದವನಿಗೆ ಶೂದ್ರನಿಗೆ ವೇದಾಧಿಕಾರ ಕೊಡುವುದಿಲ್ಲ ಆದರೆ ವೇದಾರ್ಥವನ್ನು ಶ್ರವಣೋಪಾಸನೆಯಿಂದ ತಿಳಿದು ಧ್ಯಾನಮಾಡುವ ಅನಧಿಕಾರಿಗೂ ಫಲವುಂಟು.

**ದಾಸಸಾಹಿತ್ಯ :**

ಜ್ಞಾನವಂತನಾಗು, ಜ್ಞಾನಿಗಳಿಗೆ ಬಾಗು । ಜ್ಞಾನಬೆಳಕಿನಿಂದ ಜ್ಞಾನತಮವ ನೀಗು । ಜ್ಞಾನವೇ ಸಕಲ ಸಾಧನಕ್ಕೆ ಪ್ರಧಾನ । ಜ್ಞಾನವೇ ಮುಖ್ಯ ಮುಕುತಿಗೆಸೋಪಾನ। ಜ್ಞಾನವೇ ಭುವಕೆ ಮೋಚನವಮಾಡುವುದು । ಜ್ಞಾನಕ್ಕಿಂತ ಮತ್ತೇನೂ ಅಧಿಕವಿಲ್ಲ । ಜ್ಞಾನಸುಖಕ್ಕೆ ಮೇಲೊಂದೇನೂ ತೋರುವುದಿಲ್ಲ । ಜ್ಞಾನವೇ ಹರಿಮೂರ್ತಿ ಸೂಚನೆಯ ಮಾಡುವುದು ಜ್ಞಾನರಹಿತರ ಸಂಗ ನೀನು ಮರೆಯೊ ಸು। ಜ್ಞಾನವಂತರ ಸೇವೆ ನೀನು ಪಡೆಯೊ ವೇಣುಗೋಪಾಲವಿಠಲ ಸರ್ವಕ್ಕೆ ನೀನೆ । ನೀನೇ ಎಂದು ನಲಿದಾಡೊ.

**(ಇದು ಹಿಂದಿನ ಅಧಿಕರಣಕ್ಕೂ ಕೂಡುತ್ತಿದೆ-ಶ್ರೀ ವೇಣುಗೋಪಾಲವಿಠಲರು)**

2. ಯಾತರವನಯ್ಯ ನಾನಯ್ಯ ಇಂದಿರೇಶ ॥ ಪ ॥
ಹೋತಾತ್ಮಯನೆ ನಿನ್ನಾಧೀನ ವೀ ಜಗವೆಲ್ಲಾ ॥ ಅ ॥

ಕಾಲಗುಣಕರ್ಮಸ್ವಭಾವಗಳ ಪಾನೆಮಾಡಿ । ಶ್ರೀಲೋಲ ನೀ ಸರ್ವರೊಳಗೆ ಇದ್ದು । ಲೀಲೆಗೈಯುತ ಲಿಪ್ತನಾಗದೆ ನಿರಂತರದಿ । ಪಾಲಿಸುವೆ ಸಂಹರಿಸುವೆ ದಿವಿಜ ದಾನವ ತತಿಯ ॥ ೧ ॥

(ಶ್ರೀಜಗನ್ನಾಥದಾಸರು)

3. ವೇದಶಾಸ್ತ್ರ ಪುರಾಣ ಪುಣ್ಯದ । ಹಾದಿಯನು ನಾನರಿಯೆ ತರ್ಕದ ।
ವಾದಹಲಿ ಗುರುಹಿರಿಯರರಿಯದ ಮೂಢಮತಿಯೆನಗೆ ।
ಆದಿಮೂರುತಿ ನೀನು ನೆರೆ ಕರು । ಣೋದಯನು ಹೃದಯಾಂಗಣದಿ ಜ್ಞಾ ।
ನೋದಯವನನಗಿತ್ತು ರಕ್ಷಿಸು ನಮ್ಮ ನನವರತ.

(ಹರಿಭಕ್ತಿಸಾರ- ಶ್ರೀಕನಕದಾಸರು)

## 3. ಅವಿಶೇಷಾಧಿಕರಣ

ಸೂತ್ರ :-

1. ಓಂ ನ, ಅವಿಶೇಷಾತ್ ಓಂ ॥ ೧೩ ॥

ಜ್ಞಾನಾಧಿಕಾರದಲ್ಲಿ ತಾರತಮ್ಯವಿದೆ.

ದಾಸಸಾಹಿತ್ಯ :-

ಜ್ಞಾನ ಭಕ್ತ್ಯಾದ್ಯಖಿಳಗುಣ ಚತು । ರಾನನನೊಳಿಪ್ಪವಂತೆ ಮುಖ್ಯ ।
ಪ್ರಾಣನಲಿ ಚಿಂತಿಪುದು ಯತ್ಕಿಂಚಿತು ಕೊರತೆಯಾಗಿ ॥
ನ್ಯೂನ ಯಜುಗುಣ ಜೀವರಲ್ಲಿ ಕ್ರ । ಮೇಣ ವೃದ್ಧಿ ಜ್ಞಾನ ಭಕುತಿಸ ।
ಮಾನ ಭಾರತಿ ವಾಣಿಗಳಲಿ ಪದ ಪ್ರಯುಕ್ತಾಧಿಕ ॥

## 4. ಸ್ತುತ್ಯಧಿಕರಣ

ಸೂತ್ರಗಳು :-

1. ಓಂ ಸ್ತುತಯೇ ಅನುಮತಿರ್ವಾ ಓಂ ॥ ೧೪ ॥
2. ಓಂ ಕಾಮಕಾರೇಣ ಚೈಕೇ ಓಂ ॥ ೧೫ ॥
3. ಓಂ ಉಪಮರ್ದಂ ಚ ಓಂ ॥ ೧೬ ॥
4. ಓಂ ಊರ್ಧ್ವರೇತಃಸ್ಸು ಚ ಶಬ್ದೇ ಹಿ ಓಂ ॥ ೧೭ ॥
5. ಓಂ ಪರಾಮರ್ಶಂ ಜೈಮಿನಿಃ, ಅಚೋದನಾ ಚಾಪವದತಿ ಹಿ ಓಂ ॥ ೧೮ ॥

6. ಓಂ ಅನುಷ್ಠೇಯಂ ಬಾದರಾಯಣಃ, ಸಾಮ್ಯಶ್ರುತೇಃ ಓಂ|| ೧೯ ||

7. ಓಂ ವಿಧಿರ್ವಾ ಧಾರಣವತ್ ಓಂ || ೨೦ ||

8. ಓಂ ಸ್ತುತಿಮಾತ್ರಮುಪಾದಾನಾದಿತಿ
ಚೇನ್ನಾಪೂರ್ವತ್ವಾತ್ ಓಂ || ೨೧ ||

9. ಓಂ ಭಾವಶಬ್ದಾಚ್ಚ ಓಂ || ೨೨ ||

10. ಓಂ ಪಾರಿಪ್ಲವಾರ್ಥಾ ಇತಿ ಚೇನ್ನ, ವಿಶೇಷಿತತ್ವಾತ್ ಓಂ|| ೨೩ ||

11. ಓಂ ತಥಾ ಚೈಕವಾಕ್ಯೋಪಬಂಧಾತ್ ಓಂ || ೨೪ ||

12. ಓಂ ಅತ ಏವ ಚಾಗ್ನೀಂಧನಾದ್ಯನಪೇಕ್ಷಾ ಓಂ || ೨೫ ||

13. ಓಂ ಸರ್ವಾಪೇಕ್ಷಾ ಚ ಯಜ್ಞಾದಿಶ್ರುತೇರಶ್ವವತ್ ಓಂ || ೨೬ ||

14. ಓಂ ಶಮದಮಾದ್ಯುಪೇತಸ್ಸ್ಯಾತ್ತಥಾಪಿ ತು
ತದ್ವಿಧೇಸ್ತದಂಗತಯಾ ತೇಷಾಮವಶ್ಯಾನುಷ್ಠೇಯತ್ವಾತ್ ಓಂ || ೨೭ ||

15. ಓಂ ಸರ್ವಾನ್ನಾನುಮತಿಶ್ಚ ಪ್ರಾಣಾತ್ಯಯೇ
ತದ್ದರ್ಶನಾತ್ ಓಂ || ೨೮ ||

16. ಓಂ ಅಬಾಧಾಚ್ಚ ಓಂ || ೨೯ ||

17. ಓಂ ಅಪಿ ಸ್ಮರ್ಯತೇ ಓಂ || ೩೦ ||

18. ಓಂ ಶಬ್ದಶ್ಚಾತೋಽಕಾಮಕಾರೇ ಓಂ || ೩೧ ||

19. ಓಂ ವಿಹಿತತ್ವಾಚ್ಚಾಶ್ರಮಕರ್ಮಾಪಿ ಓಂ || ೩೨ ||

20. ಓಂ ಸಹಕಾರಿತ್ವೇನ ಚ ಓಂ || ೩೩ ||

ಜ್ಞಾನಿಗಳಿಗೆ ಸದಸತ್ಪ್ರವೃತ್ತಿಯಲ್ಲಿ ವಿಶೇಷವನ್ನು ಹೇಳುತ್ತದೆ.

ಜ್ಞಾನಿಯಾದವನು ಸ್ವೇಚ್ಛಾಪ್ರಕಾರ ಏನು ಕರ್ಮ ಮಾಡಿದರೂ ಮುಕ್ತನೇ ಆಗುತ್ತಾನೆ. ಏನೇ ಕರ್ಮಮಾಡಲಿ ಜ್ಞಾನಿಯು ಕರ್ಮಕ್ಷಯಾನಂತರ ಮೋಕ್ಷ ಪಡೆಯುವನು. ಯುಕ್ತಾಯುಕ್ತ, ನಿಷಿದ್ಧಾದಿ ಕರ್ಮಗಳನ್ನು ಜ್ಞಾನಿಯಾದವನು ಆಚರಿಸಿದರೂ ದೋಷ ತಟ್ಟುವುದಿಲ್ಲ. ಜ್ಞಾನಿಗೂ ನಿತ್ಯ ವಿಧಿಯ ಕರ್ಮ ಯಜ್ಞಾದಿಗಳು ಉಂಟು. ವರ್ಣಾಶ್ರಮ ಕರ್ಮಗಳನ್ನೇ ಮಾಡಬೇಕು. ಇತ್ಯಾದಿ ಜ್ಞಾನಿಗೆ ಸತ್ಪ್ರವೃತ್ತಿಯಿಂದ ಮುಕ್ತಿಯಲ್ಲಿ ಆನಂದಾಭಿವೃದ್ಧಿ ಅಸತ್ಪ್ರವೃತ್ತಿಯಿಂದ ಹ್ರಾಸರೂಪವಾದ ವಿಶೇಷ ಇದೆ.

ದಾಸಸಾಹಿತ್ಯ :

1. ವಿಧಿ ನಿಷೇದಗಳು ಇತರರಿಗುಂಟು ಅದು ಬುಧರಿಗಲ್ಲ ಎಂಬೋದು ಖರೆ.

2. ಸಕಲ ಸತ್ಕ್ರಿಯ ಯಾಗಗಳು ಬಂಧಕವೋತ್ವತ್ವರವಲ್ಲದಿರೆ.

(ಶ್ರೀ ಶ್ರೀದವಿಠಲರು)

3. ಮುಕುತಿಯಾದವರ ಪ್ರಕರಣ ತಿಳಿವುದು ಭಕುತಿಯಿಂದಲಿ ಭಾವಶುದ್ಧನಾಗಿ । ಮುಕುತರೊಳಗೆ ತಾರತಮ್ಯವುಂಟು । ಅಶಕುತರಾಗಿಪ್ಪರು ಹರಿ ಪಾದದಿ । ಕಕುಲಾತಿ ಮೊದಲಾದ ದೋಷರೂಪಗಳಲ್ಲಿ . . . . . . . .

2. ನಿರ್ದುಃಖದಲ್ಲಿ ಸಮರು ಸರ್ವಜೀವಿಗಳನ್ನು । ದುರ್ದರ್ಷ ವಿಜಯ ವಿಠಲ ಗತಿ ಪ್ರದಾತ.

(ಮುಕ್ತರ ತಾರತಮ್ಯ ಸುಳಾದಿ - ಶ್ರೀ ವಿಜಯದಾಸರು)

## 5. ಉಭಯಲಿಂಗಾಧಿಕರಣ

ಸೂತ್ರಗಳು :

1. ಓಂ ಸರ್ವಥಾ ಅಪಿ ಚ ಏವ, ಉಭಯಲಿಂಗಾತ್ ಓಂ || ೩೪ ||
2. ಓಂ ಅನಭಿಭವಂ ಚ ದರ್ಶಯತಿ ಓಂ || ೩೫ ||
3. ಓಂ ಅಂತರಾ ಚಾಪಿ ತು ತದ್ದೃಷ್ಟೇಃ ಓಂ || ೩೬ ||
4. ಓಂ ಅಪಿ ಸ್ಮರ್ಯತೇ ಓಂ || ೩೭ ||
5. ಓಂ ವಿಶೇಷಾನುಗ್ರಹಂ ಚ ಓಂ || ೩೮ ||
6. ಓಂ ಅತಸ್ತ್ವಿತರಜ್ಜ್ಯಾಯೋಲಿಂಗಾಚ್ಚ ಓಂ || ೩೯ ||
7. ಓಂ ತದ್ಭೂತಸ್ಯ ತು ತದ್ಭಾವೋಜೈಮಿನೇರಪಿ ನಿಯಮಾತದ್ರೂಪಾಭಾವೇಭ್ಯಃ ಓಂ || ೪೦ ||

ಬ್ರಹ್ಮಜ್ಞಾನವು ಅಧಿಕಾರಿಗಳಿಗೆ ಮಾತ್ರ ಪ್ರಾಪ್ತಿ ಎಂದು ಹೇಳಿದೆ. ಜ್ಞಾನಿಗಳಿಗೆ ತತ್ವಜ್ಞಾನವೇ ಹೊರತು ಆಯೋಗ್ಯರಿಗಲ್ಲ. ಶ್ರೀಹರಿ ಯೋಗ್ಯರಿಗೆ ಸದ್ಗತಿಯನ್ನೂ ಅಯೋಗ್ಯರಿಗೆ ಅಂಧತಮಸ್ಸನ್ನು ಕೊಡುತ್ತಾನೆ. ಪ್ರಹ್ಲಾದಾದಿ ಭಕ್ತರು ಅಸುರ ದೇಹದಿಂದ ಹುಟ್ಟಿದಾಗ್ಯೂ ನೈಜವಾದ ಜ್ಞಾನಿಗಳಾದ ಕಾರಣ ಮುಕ್ತಿಯೋಗ್ಯರು.

ದಾಸಸಾಹಿತ್ಯ :-

ಜನರೊಳಗೆ ನೀನಿದ್ದು ಜನುಮ ಜನುಮಗಳಲ್ಲಿ ಗುಣ, ಕಾಲ, ಕ್ರಿಯಾ,

ಸ್ವಭಾವಂಗಳನುಸರಿಸಿ ಪುಣ್ಯ ಪಾಪವ ಮಾಡಿಸುವ ಕರುಣಾಳು ಸ್ವಾಮಿ ನಿನ್ನ ಸಂಕಲ್ಪಾನುಸಾರ ಮಾಡೊ.

(ಶ್ರೀ ಜಗನ್ನಾಥದಾಸರು)

2. ಸಮ್ಮನೆ ದೊರಕುವುದೇ ಶ್ರೀರಾಮನ ದಿವ್ಯ ನಾಮವು
ಜನ್ಮ ಜನ್ಮಾಂತರದ ದುಷ್ಕರ್ಮ ಹೋದವಗಲ್ಲದೆ.

(ಶ್ರೀ ಪುರಂದರದಾಸರು)

3. ಸರ್ವದೇಶವು ಪುಣ್ಯದೇಶವು । ಸರ್ವಕಾಲವು ಪರ್ವಕಾಲವು ।
ಸರ್ವಜೀವರು ದಾನಪಾತ್ರರು ಮೂರುಲೋಕದಲಿ ॥
ಸರ್ವ ಮಾತುಗಳೆಲ್ಲ ಮಂತ್ರವು । ಸರ್ವ ಕೆಲಸಗಳೆಲ್ಲಾ ಪೂಜೆಯು
ಸರ್ವ ವಂದ್ಯನ ವಿಮಲ ಮೂರ್ತಿಧ್ಯಾನ ಉಳ್ಳವಗೆ.

(ಶ್ರೀ ಹರಿಕಥಾಮೃತಸಾರ)

## 6. ಅಧಿಕಾರಿಕಾಧಿಕರಣ

**ಸೂತ್ರಗಳು :–**

1. **ಓಂ ನ ಚಾಧಿಕಾರಿಕಮಪಿ, ಪತನಾನುಮಾನಾತ್ತದ ಯೋಗಾತ್ ಓಂ** ॥ ೪೦ ॥

2. **ಓಂ ಉಪಪೂರ್ವಮಪೀತ್ಯೇಕೇ ಭಾವಶಮನ- ವತ್ತದುಕ್ತಂ ಓಂ** ॥ ೪೧ ॥

3. **ಓಂ ಬಹಿಸ್ತೂಭಯಥಾಪಿ ಸ್ಮೃತೇಚಾರಾಚ್ಚ ಓಂ** ॥ ೪೨ ॥

ಅವರವರ ಯೋಗ್ಯತೆಗನುಗುಣವಾದ ಪದವಿ ಹೊಂದಬೇಕೇ ಹೊರತು, ಅಧಮಾಧಿಕಾರಿಗಳು ಉತ್ತಮ ಪದವಿಯನ್ನು ಅಪೇಕ್ಷಿಸಬಾರದು.

**ದಾಸಸಾಹಿತ್ಯ :–**

ಅವರವರ ಯೋಗ್ಯತೆಯನರಿತು ಪ್ರೇರಕನಾಗಿ ಅವರಿಂದ ಪೂಜೆಗೊಳುವ ಅವನೀಶ ಪುರಂದರ ವಿಠಲ ನಿನ್ನದಯವೇ ಸಾಧನವು.

(ಶ್ರೀ ಪುರಂದರದಾಸರು)

ತಾರತಮ್ಯ ಜ್ಞಾನ ಮುಕ್ತಿ । ದ್ವಾರವೆನಿಪುದು ಭಕ್ತಜನರಿಗೆ
ತೋರಿ ಪೇಳಿ ಸುಖಾಬ್ಧಿಯೊಳು ಲೋಲ್ಯಾಡುವುದು ಬುಧರು ॥

ಕ್ರೂರ ಮಾನವರಿಗಿದು ಕರ್ಣಕ । ಘೋರವೆನಿಪುದು ನಿತ್ಯದಲಿ ಅಧಿ
ಕಾರಿಗಳಿಗಿದನರುಪುವುದು ದುಷ್ಪ್ರವರ್ತಿಗಳ ಬಿಟ್ಟು ॥

(ಹರಿಕಥಾಮೃತಸಾರ)

## 7. ಫಲಶ್ರುತ್ಯಧಿಕರಣ

**ಸೂತ್ರಗಳು :-**

**1. ಓಂ ಸ್ವಾಮಿನಃ, ಫಲಶ್ರುತೇರಿತ್ಯಾತ್ರೇಯಃ ಓಂ ॥ ೪೪ ॥**

**2. ಆರ್ತ್ವಿಜ್ಯಮಿತ್ಯೌಡು ಲೋಮಿಸ್ತಸ್ಮೈ ಹಿ ಪರಕ್ರಿಯತೇ ಓಂ ॥ ೪೫ ॥**

**3. ಓಂ ಸಹಕಾರ್ಯಂತರವಿಧಿಃ ಪಕ್ಷೇಣ ತೃತೀಯಾಂ, ತದ್ವತೋ ವಿಧ್ಯಾದಿವತ್ ಓಂ ॥ ೪೬ ॥**

ಜ್ಞಾನವು ತತ್ವಾಭಿಮಾನಿ ದೇವತೆಗಳಿಗೆ ಫಲಕೊಡುವುದೊ ಪ್ರಜೆಗಳಿಗೂ ಫಲವಿದೆಯೋ ಅಂದರೆ ತತ್ವಾಭಿಮಾನಿದೇವತೆಗಳೇ ಕಾರ್ಯಮಾಡಿಸಿ ವಿಶೇಷ ಫಲಗಳಿಸಿದರೂ ಜೀವಿಗೂ ಸ್ವಲ್ಪ ಫಲವನ್ನು ಕೊಡುವರು.

**ದಾಸಸಾಹಿತ್ಯ :**

ತತುವಾಭಿಮಾನಿದಿವಿಜರೆಲ್ಲಾ । ಎನ್ನದುರ್ವಿಷದ ಬರೆಯಿಂದಲೊಮ್ಮೆ ತೊಲಗಿಸಲಿಲ್ಲ । ಪಾಪ ಕರ್ಮದಲ್ಲಿ ಎನ್ನರತನೆನ್ನಾ ಮಾಡಿ ದಣಿಸುವರಲ್ಲಾ । ಇದಕೆ ಎನ್ನ ಪ್ರಯತನ ಇಷ್ಟಿಲ್ಲ । ವಿತತಾಚ್ಯುತ ಮೂರುತಿ ನೀನೊಲಿಯಲು ಪ್ರತಿಕೂಲರೆ ಅತಿಹಿತರಾಗುವರ್‍ಯ್ಯ ಶ್ರೀನಿವಾಸ ಸಲಹೊ ಎನ್ನನು ನೀನು.

(ಶ್ರೀ ಗೋಪಾಲದಾಸರು)

ಬುದ್ಧ್ಯಾದಿ ಇಂದ್ರಿಯಗಳೊಳಗೆ ತತ್ಪತಿಗಳೊಳಗಿದ್ದು । ಬಹುವಿಧ ಚೇಷ್ಟೆಗಳನ ಮಾಡಿ । ಬದ್ಧರನು ಮಾಳ್ಪ ಭವದೊಳಗಲ್ಪ ಜೀವರನಿ । ರುದ್ಧನೆಂದೆನಿಪ ಎಲ್ಲರೊಳು ವ್ಯಾಪಕರಾಗಿ ॥

ಪ್ರಣವಪ್ರತಿಪಾದ್ಯ ಪ್ರಹ್ಲಾದವರದ ಪ್ರಣತ ಕಾಮದನೆ ಪ್ರಾರ್ಥಿಸುವೆ ಪ್ರಭುವೆಂದು॥

## 8. ಕೃತ್ಸ್ನಭಾವಾಧಿಕರಣ

**ಸೂತ್ರಗಳು :-**

**1. ಓಂ ಕೃತ್ಸ್ನಭಾವಾತ್ತು ಗೃಹಿಣೋಪಸಂಹಾರಃ ಓಂ ॥ ೪೭ ॥**

2. ಓಂ ಮೌಸವದಿತರೇಷಾಮುಪದೇಶಾತ್ ಓಂ || ೪೮ ||

"ಕುಟುಂಬೇಶುಚೌದೇಶೇ" ಇತ್ಯಾದಿ ಸಾಕ್ಯಾನುಸಾರ ಗೃಹಸ್ಥಾಶ್ರಮಿಗೆ ಮೋಕ್ಷ ಹೇಳಿಡಾಗ್ಯೂ ಯತ್ಯಾಶ್ರಮ ಇದಕ್ಕಿಂತ ಶ್ರೇಷ್ಟ ಯತಿಗಳಿಗಿಂತಲೂ ದೇವತೆಗಳೇ ಶ್ರೇಷ್ಟ.

**ದಾಸಸಾಹಿತ್ಯ :**

ಪಾಕಶಾಸನ ಮುಖ್ಯ ಸಕಲ ದಿ । ವಾಕಸರಿಗಭಿನಮಿಪೆ ಋಷಿಗಳಿ
ಗೇಕ ಚಿತ್ತದಿ ಪಿತೃಗಳಿಗೆ ಗಂಧರ್ವ ಕ್ಷಿತಿಪರಿಗೆ ॥
ಆ ಕಮಲನಾಭಾದಿಯತಿಗಳಿ । ನೇಕಕಾನಮಿಸುವೆನು
ಬಿಡದೆರವಾಕಳತ್ರನ ದಾಸವರ್ಗಕ್ಕೆನಮಿಪೆ ನನವರತ ॥

(ಅವರೋಹಣ ತಾರತಮ್ಯ - ಹರಿಕಥಾಮೃತಸಾರ)

## 9. ಅನ್ವಯಾಧಿಕರಣ

**ಸೂತ್ರಗಳು :-**

1. ಓಂ ಅನಾವಿಷ್ಕುರ್ವನ್, ಅನ್ವಯಾತ್ ಓಂ || ೪೯ ||

ತತ್ವಜ್ಞಾನವನ್ನು ಯೋಗ್ಯರಿಗೆ ಮಂತ್ರಜ್ಞಾನ ಹುಟ್ಟುದಂತೆ ಉಪದೇಶ ಮಾಡ ಬೇಕೇ ವಿನಹ ಆಯೋಗ್ಯರಿಗೆ ತತ್ವಜ್ಞಾನ ಉಪದೇಶ ಕೂಡದು.

**ಸಾಹಸಾಹಿತ್ಯ :-**

ಪರಮತತ್ವ ರಹಸ್ಯ ವಿದು ಭೂ । ಸುರರು ಕೇಳ್ವುದು ಸಾದರದಿ ನಿ ।
ಷ್ಠುರಿಗಳಿಗೆ ಮೂಢರಿಗೆ ಪಂಡಿತಮಾನಿ ಪಿಶುಣರಿಗೆ ॥
ಅರುಹಲಾಗದು ಪೇಳ್ವುದಲ್ಲ ನ । ವರತ ಭಗವತ್ಪಾದ ಯುಗಳಾಂ ।
ಬುರುಹ ಮಧುಕರರೆನಿಸುವರಿಗರುಪುವುದು ಮೋದದಲಿ ॥

(ಸರ್ವಪ್ರತೀಕ ಸಂಧಿ - ಹರಿಕಥಾಮೃತಸಾರ)

## 10. ಐಹಿಕಾಧಿಕರಣ

**ಸೂತ್ರ :-**

1. ಓಂ ಐಹಿಕಮಪ್ರಸ್ತುತ ಪ್ರತಿಬಂಧೇ, ತದ್ದರ್ಶನಾತ್ ಓಂ|| ೫೦ ||

ಪ್ರಾರಬ್ಧ ಪ್ರತಿಬಂಧಕವಿಲ್ಲದಿದ್ದರೆ ಜ್ಞಾನವು ಈ ಜನ್ಮದಲ್ಲಿಯೇ ಹುಟ್ಟುತ್ತದೆ ಪ್ರಾರಬ್ಧ ಪ್ರತಿಬಂಧಕವಿದ್ದರೆ "ಶ್ರುತ್ವಾತ್ಮಾನಂ" ಎನ್ನುವ ಶ್ರುತಿಯಂತೆ ಜನ್ಮಾಂತರ ದಲ್ಲಿ ಹುಟ್ಟುತ್ತದೆ.

ದಾಸಸಾಹಿತ್ಯ :-

1. ಆಗಮು ಸಂಚಿತ ಹರಸಿ | ಆಗುವ ಪ್ರಾರಬ್ಧಗಳ | ವೇಗಾನುಸಾರ ತೀರಿಸಿ। ತಾಗಿದ ದುಃಖಸ್ವರುಪಾ ಪೋಣಗಲಾಡಿಸಿ ಅತರವರ । ಯೋಗ್ಯತಾವರಿದು ಸುಖವ ಪಾಲಿಸಿ । ಭಾಗವತರನ ಮಾಡಿ । ಶ್ರೀಗುರು ವಿಜಯ ವಿಠಲ । ಮುಕ್ತುತಿಯ್ಯನೀವ ॥

2. ಧ್ಯಾನಾದಿಂದಲಿ ಮನಸುನಿಲಿಸಿ ಜ್ಞಾನವ ಪಡೆದು । ಆನಂದ ವಿಜಯ ವಿಠಲನ ಲೋಕವ ಸೇರೋ ॥

3. ಪ್ರಾರಬ್ಧಾಗಾಮಿ ಸಂಚಿತ ಕರ್ಮಂಗಳು । ಮೂರು ಪರಿವುಂಟು ಸರ್ವ ಜೀವರಿಗೆ । ಬೇರೆ ಬೇರೆ ಅವರವರ ಯೋಗ್ಯತಾನು । ಸಾರವಾಗಿ ಪುಣ್ಯ ಅನುಭವಿಸಿ ಈ । ಕರ್ಮತೀರಿಸಬೇಕಲ್ಲದೆ ಸುಮ್ಮನಿರ ಪೋಪುದೇ . . . . . . .

(ಅನಾದಿಕರ್ಮ ಸುಳಾದಿ - ಶ್ರೀ ವಿಜಯದಾಸರು)

## 11. ಮುಕ್ತಿಫಲಾಧಿಕರಣ

ಸೂತ್ರ :

1. ಓಂ ಏವಂ ಮುಕ್ತಿಫಲಾನಿಯಮಃ, ತದವಸ್ಥಾವ
ಧೃತೇಃ, ತದವಸ್ಥಾವಧೃತೇಃ ಓಂ || ೫೦ ||

ಬ್ರಹ್ಮಜ್ಞಾನಿಗೆ ಮೋಕ್ಷವು ಸಿದ್ಧ. ಆದರೆ ಪ್ರಾರಬ್ಧ ಕರ್ಮ ಕಳೆಯಬೇಕು. ಯಾವ ಜನ್ಮದಲ್ಲಿ ಪ್ರಾರಬ್ಧ ಕಳೆಯುವುದೊ ಅಂದಿಗೆ ಮೋಕ್ಷ, ಇಲ್ಲವೆ ಜನ್ಮಾಂತರದಲ್ಲಿ ಸಿದ್ಧ.

ದಾಸಸಾಹಿತ್ಯ :-

1. ಮುನ್ನ ಮಾಡಿದಕರ್ಮ ಬೆನ್ನ ಬಿಡದಿದ್ದೊಡೆ । ನಿನ್ನ ಓಲೈಸಲಿನ್ನೇಕೆ ಗೋವಿಂದ ದುರಿತ ಗಜ ಪಂಚಾನನ। ನರಹರಿಯು ದೇವರ ದೇವ ಕಾಯೋಗೋವಿಂದ

(ಶ್ರೀ ಶ್ರೀಪಾದರಾಜರು)

2. ಕರ್ಮ ಜಡಂಗಳು ಮರ್ಮವ ತಿಳಿದು ಫಲವೀವಾ । ನಿರ್ಮಲ ಸ್ವತಂತ್ರ ಪುರಂದರವಿಠಲಾ.

3. ಪಂಚ ಪ್ರಾಣರೂಪನೆ ಸತ್ವಕಾಯ . . . . . ಸಂಚಿತಾಗಾಮಿ ಒಡಿಸಿ -ಕೊಂಚ ಮಾಡೋ ಪ್ರಾರಬ್ಧ . . . . ನಂಬಿದೆ ನಿನ್ನಪಾದ.

(ಶ್ರೀ ವಿಜಯದಾಸರು)

—o—o—o—

## ಚತುರ್ಥಾಧ್ಯಾಯ ಪ್ರಥಮಪಾದ

### 1. ಆವೃತ್ತ್ಯಧಿಕರಣ

**ಸೂತ್ರಗಳು :-**

**1. ಓಂ ಆವೃತ್ತಿರಸಕೃದುಪದೇಶಾತ್ ಓಂ || ೧ ||**

**2. ಓಂ ಲಿಂಗಾಚ್ಚ ಓಂ || ೨ ||**

"ಸ ಆತ್ಮಾ ತತ್ವಮಸಿ" "ಆತ್ಮಾವಾಅತಿ" ಇತ್ಯಾದಿ ವಾಕ್ಯದಂತೆ ಜ್ಞಾನಕ್ಕಾಗಿ ಶ್ರವಣಾದಿ ಆವೃತ್ತಿ ಮಾಡಬೇಕು. "ನಿತ್ಯಶಃ ಶ್ರವಣಂಚ" ಎನ್ನುವ ಶ್ರುತಿಯಂತೆ ಶ್ರವಣ, ಮನನ, ಧ್ಯಾನಾದಿಗಳನ್ನು ಆವೃತ್ತಿ ಮಾಡುತ್ತಲೇ ಇರಬೇಕು. ಜ್ಞಾನ ಸಿದ್ಧಿಗಾಗಿ.

**ದಾಸಸಾಹಿತ್ಯ -**

ಕಾಲಕಾಲಕ್ಕೆ ಹರಿಕಥಾ ಶ್ರವಣ । ಗುರುಗಳ ಮುಖದಿಂದ ।
ಕೇಳಿದ್ದೇ ಕೇಳುತ್ತ ಹೇಳುತ್ತ । ಕೇಳಿದಂತೆ ಧ್ಯಾನವಮಾಡುತ್ತಾ ।
ಮಾಡಿದ್ದನುಭವಕೆ । ಮೇಲಾಗಿ ಒಂದೊಂದಗುವ ತನಕ। ಹೇ ಪ್ರಾಣಿ ನಿನ್ನ ॥
ಭ್ರಾಂತಿ ಬಿಡದೋ ಭಾಗ್ಯಪುರುಷಾನೆ ॥

(ಶ್ರೀ ಗೋಪಾಲದಾಸರು)

### 2. ಆತ್ಮಾಧಿಕರಣ

**ಸೂತ್ರ :-**

**1. ಓಂ ಆತ್ಮೇತಿ ತೂಪಗಚ್ಛಂತಿ, ಗ್ರಾಹಯಂತಿ ಚ ಓಂ || ೩ ||**

ಶ್ರೀವಿಷ್ಣುವೇ ನನಗೆ ಸ್ವಾಮಿ ಎನ್ನುವ ಉಪಾಸನೆ ಸಜ್ಜನರು ಸರ್ವಥಾ ಮಾಡುತ್ತಾ ಶಿಷ್ಯರಿಗೂ ಉಪದೇಶ ಮಾಡುತ್ತಿರುತ್ತಾರೆ. "ಆತ್ಮೇತ್ಯುಪಾಸನಂ ಕಾರ್ಯಂ" ಇತ್ಯಾದಿ ಪ್ರಮಾಣಗಳಂತೆ.

**ದಾಸಸಾಹಿತ್ಯ :-**

1. "ಎನ್ನಸ್ವಾಮಿ. ಎನ್ನ ಸರ್ವಸ್ವಾಮಿ, ಭಿನ್ನರಹಿತ ಅಖಿಲ ಜಗದಂತ-ರ್ಯಾಮಿ" ಅವಗತಿಯೋ ಎನಗೆ.

(ಶ್ರೀ ವೇಣುಗೋಪಾಲ ವಿಠಲರು)

2. ಬಾ ವೇಂಕಟಶೈಲಾಧಿಪ ಮನ್ಮನಕೆ । ತಡಮಾಡುವುದ್ಯಾಕೆ ॥ ಪ ॥

(ಮಮಸ್ವಾಮಿ) ಮಮಸರ್ವಸ್ವಾಮಿ, ಮದಂತರ್ಯಾಮಿ । ಸರ್ವಾಂತರ್ಯಾಮಿ

ಆಮಯಾತ್ಮ ನಿರ್ಗುಣ ನಿಷ್ಕಾಮಿ । ಸೇವಿತ ಶ್ರೀ ಭೂಮಿ

ಶಮಲ ವಿವರ್ಜಿತ ಅಮಿತ ಸುಗುಣಪೂರ್ಣ । ಅಮಲ ಮಹಿಮ

ಖಳ ದಮನ ದಯಾಳೋ ॥ ೨ ॥

(ಶ್ರೀಜಗನ್ನಾಥದಾಸರು)

## 3. ನ ಪ್ರತೀಕಾಧಿಕರಣ

**ಸೂತ್ರ:**

**1. ಓಂ ನ ಪ್ರತೀಕೇ ನ ಹಿ ಸಃ ಓಂ** ॥ ೪ ॥

"ನಾಮಾದಿ ಪ್ರಾಣ ಪರ್ಯಂತಂ" ಇತ್ಯಾದಿ ಶ್ರುತಿಯಂತೆ ನಾಮದಲ್ಲಿ ಬ್ರಹ್ಮನು ಇದ್ದಾನೆಂದು ಉಪಾಸನೆ ಮಾಡಬೇಕೇ ಹೊರತು ಐಕ್ಯೋಪಾಸನೆ ಕೂಡದು. ಆದ್ದರಿಂದ ಪ್ರತೀಕವೇ ವಿಷ್ಣು ಎಂದು ಉಪಾಸನೆ ಮಾಡದೆ ಅದು ಉತ್ತಮಾಧಿಷ್ಠಾನ ಎಂದರಿಯಬೇಕು.

**ದಾಸಸಾಹಿತ್ಯ :-**

ಮಾನವ ಮರೆಮರೆಸೋ ಹರಿಯು, ಬಹು ॥ ಪ ॥

ಜನುಮಗಳಲ್ಲಿ ಪಟ್ಟ ಭವಣೆಗಳರಿಯು ॥ ಅ ॥

ಜೀವವಾಗಿ ಪೇಳುವೆ ಸೊಲ್ಲ, ಹರಿ
ಕಥೆಯಲ್ಲಿ ನಿರತನಾಗಿರು ಲೋಕದಲ್ಲು
ಪ್ರತಿಮೆ ಪೂಜಿಸಲು ಅಲ್ಲೇನಿಲ್ಲ, ಹರಿ
ಕ್ಷಿತನೆಂಬರಾಯ ಈ ಮಹಿಮೆಯ ಬಲ್ಲ ॥ ೪ ॥

(ಶ್ರೀಜಗನ್ನಾಥದಾಸರು)

## 4. ಬ್ರಹ್ಮಾಧಿಕರಣ

**ಸೂತ್ರ :-**

**1. ಓಂ ಬ್ರಹ್ಮದೃಷ್ಟಿರುತ್ಕರ್ಷಾತ್ ಓಂ** ॥ ೫ ॥

ಬ್ರಹ್ಮತ್ವೋಪಾಸವು ಅತ್ಯಾವಶ್ಯಕವಾದದ್ದು. ಸರ್ವಗುಣ ಪರಿಪೂರ್ಣನಾದ ಶ್ರೀಹರಿಯ ಪ್ರೀತಿ ವಿಷಯಕ್ಕೆ ಹೇತುವಾಗಿರುವುದರಿಂದ ಅದು ಮೋಕ್ಷಕ್ಕೆ ಕಾರಣೀಭೂತವಾದದ್ದರಿಂದ ಸರ್ವದಾ, ಸರ್ವ ಪ್ರಕಾರದಿಂದಲೂ ಶ್ರೀಹರಿಯನ್ನು ಉಪಾಸನೆ ಮಾಡಲೇಬೇಕು.

ದಾಸಸಾಹಿತ್ಯ :-

ಜೀವ ಅಸ್ವಾತಂತ್ರ ದೇವ ನಿಜ ಸ್ವತಂತ್ರ ।
ಜೀವಜಡರು ದೇವರಾಧೀನವೆಂದು
ಜೀವೋತ್ತಮರಲ್ಲಿ ಭಕುತಿ, ಜಡದಲ್ಲಿ ವಿರಕುತಿ ।
ಕಾವ ಕೊಲ್ಲು ನೆಲ್ಲಾ ಶ್ರೀಹರಿಯೆಂಬ ಜ್ಞಾನವ
ಇದ ಪಾಲಿಸೈಯ.

(ಶ್ರೀ ಗೋಪಾಲದಾಸರು)

ಹರಿಯ ವ್ಯಾಪ್ತಿಯು ಪರಮಾದ್ಭುತಮಹಿಮ । ಪರಮೈಶ್ವರ್ಯ ಭರಿತ ಪರ ಬೊಮ್ಮ । ಪರಮಾತ್ಮನ ರಕ್ಷಣೆ ಮರೆಯದೆ ಸ್ಮರಿಸುವುದು । ಕರುಣ ಕಾಣುವಿ ಇದರಿಂದ ಬೇಗ ಪರಮ ಮುಖ್ಯ ಜಗಕೆ ವೇಣುಗೋಪಾಲವಿಠಲ ಅರಸಿನ ಲೀಲೆಯ ನರಿತು ಸುಖಿಸುವುದು.

2. ಅಧೀನ ತಿಳಿಯುವುದಕ್ಕಿಂತ ಅನ್ಯತಪವಿಲ್ಲ

(ಶ್ರೀವೇಣುಗೋಪಾಲದಾಸರು)

## 5. ಆದಿತ್ಯಾಧಿಕರಣ

ಸೂತ್ರ :-

**1. ಓಂ ಆದಿತ್ಯಾದಿಮತಯಶ್ಚಾಂಗ ಉಪಪತ್ತೇಃ ಓಂ** ॥ ೬ ॥

"ಚಕ್ಷೋಃಸೂರ್ಯೋಃ ಅಜಾಯತ" ಇತ್ಯಾದಿ ಶ್ರುತಿರೀತ್ಯ ವಿಷ್ಣುವಿನ ಅಂಗ-ವನ್ನು ಆಧಿತ್ಯಾದಿ ದೇವತೆಗಳು ಆಶ್ರಯಿಸಿಕೊಂಡು ಇದ್ದಾರೆಂಬ ದೇವತೋಪಾಸನ ಅವಶ್ಯಕವಾದದ್ದು. ಅಂದರೆ ಬ್ರಹ್ಮಾದಿ ದೇವತೆಗಳು ಶ್ರೀಹರಿಯೆ ತಮಗೆ ಆಶ್ರಯ ನೆಂಧು ಸದಾ ಸರ್ವತ್ರ ಉಪಾಸನೆ ಮಾಡಬೇಕು.

ದಾಸಸಾಹಿತ್ಯ:-

ಸಕಲ ಗ್ರಹಬಲ ನೀನೆ ಸರಸಿಜಾಕ್ಷ ॥ ಪ ॥

(ಶ್ರೀಪುರಂದರದಾಸರು)

ಆವ ಪರಬೊಮ್ಮನತಿ ವಿಮಲಾಂ । ಗಾವ ಬದ್ಧರೆ ಎಂದೆನಿಸಿದರಾ
ಜೀವ ಭವ ಮೊದಲಾದ ಮರರಸುದಿನದಿ ಹರಿ ಪದವ ॥
ಸೇವಿಪರಿಗನುಕೂಲರಲ್ಲದೆ । ತಾವು ಇತರನು ಕೆಡಿಸಬಲ್ಲರೆ ।
ಶ್ರೀವಿಲಾಸಾಸ್ಪದನ ದಾಸರಿಗುಂಟೆ ಅಪಜಯವು॥

(ಹರಿಕಥಾಮೃತಸಾರ)

## 6. ಆಸೀನಾಧಿಕರಣ

ಸೂತ್ರಗಳು :-

1. ಓಂ ಆಸೀನಃ, ಸಂಭವಾತ್ ಓಂ || ೭ ||

2. ಓಂ ಧ್ಯಾನಾಚ್ಚ ಓಂ || ೮ ||

3. ಓಂ ಅಚಲತ್ವಂ ಚಾಪೇಕ್ಷ್ಯ ಓಂ || ೯ ||

4. ಓಂ ಸ್ಮರಂತಿ ಚ ಓಂ || ೧೦ ||

5. ಓಂ ಯತ್ರೈಕಾಗ್ರತಾ ತತ್ರಾವಿಶೇಷಾತ್ ಓಂ ||೧೧||

ಭಗವದ್ ಧ್ಯಾನದಲ್ಲಿ ಆಸನ ನಿಯಮ ಪರಿಪಾಲಿಸಬೇಕು. ಆಸನದಲ್ಲಿ ಕೂತು ಕೊಂಡಾಗಲೇ ಉಪಾಸನೆ ಸಾಧ್ಯ ಎಂದು ತಿಳಿಸುತ್ತದೆ. ಸ್ಮರಣೆಯಲ್ಲಿಲ್ಲದಿದ್ದರೂ ಧ್ಯಾನಕಾಲಕ್ಕೆ ಆಸನ ಅತ್ಯಾವಶ್ಯಕ, ಇಲ್ಲವಾದಲ್ಲಿ ಮನೋವಾಕ್ಯುಲತೆ ಬರುತ್ತಿದೆ. "ತಮೇವ ದೇಶಲಸೇವತ" ಎಂಬ ಶ್ರುತಿಯಂತೆ ಯಾವದೇಶ ಹಾಗೂ ಕಾಲದಲ್ಲಿ ಆಗಲಿ ಏಕಾಗ್ರತೆ ಹುಟ್ಟಿದಾಗ ಧ್ಯಾನ ಮಾಡಬೇಕು. ಪರ್ವತಾಗ್ರಾದಿ ನಿಯಮವಿಲ್ಲ.

ದಾಸಸಾಹಿತ್ಯ :-

ಧ್ಯಾನವನೆ ಮಾಡು ಬಿಂಬ ಮೂರುತಿಯ || ಪ ||
ಆನಂದದಲಿ ಕುಳಿತು ಅಂತರಂಗದಲ್ಲಿ || ಅ ||
ಸದಾಚಾರನಾಗಿ ದ್ವಾದಶ ಗುರುಗಳಿಗೆರಗಿ
ಮುದದಿಂದ ಮೂಲ ಮಂತ್ರವನು ಜಪಿಸಿ
ಸದ ಮಲ ಭಕುತಿಯಲಿ ದೇಹಸ್ಥಿತಿಯನೇ ತಿಳಿದು
ಪದುಮಾಸನವಹಾಕಿ ಪರಮ ವಿಶ್ವಾಸದಲಿ || ೧ ||

(ಶ್ರೀವಿಜಯದಾಸರು)

## 7. ಆಪ್ರಾಯಣಾಧಿಕರಣ

ಸೂತ್ರ :-

1. ಓಂ ಆಪ್ರಾಯಣಾತ್ತತ್ರಾಪಿ ಹಿ ದೃಷ್ಟಂ ಓಂ || ೧೨ ||

ಮುಕ್ತಿ ಪರ್ಯಂತ ಭಗವಧ್ಯಾನ ಮಾಡುತ್ತಿರಬೇಕು, ಎಂದು ಸಮರ್ಥಿತ ವಾಗಿದೆ. "ಮುಕ್ತಾ ಅಪಿ ಹ್ಯೇನ ಮುಪಾಸತೇ" ಎಂಬ ಶ್ರುತಿಯಂತೆ.

ದಾಸಸಾಹಿತ್ಯ :-

ಜ್ಞಾನ ಪ್ರಕಾಶದಲಿ ಇದ್ದು ನಿನ್ನ ಹೃದಯ

ಸ್ಥಾನದಲಿ ಅಷ್ಟದಳ ಕಮಲ ಮಧ್ಯ
ಶ್ರೀನಿವಾಸನ ಮೂರ್ತಿ ನಿಲ್ಲಿಸಿ ಬಾಹ್ಯದಲಿ
ಏನೇನು ಪೂಜೆಯನು ಉಳ್ಳದನು ಮಾಡೊ ॥ ೬ ॥

ಈಪರಿ ಧ್ಯಾನಿಸಲು ದೇವ ಕರುಣವ ಮಾಡೆ
ಪಾಪ ಸಂಚಿತವು ಪ್ರಾರಬ್ಧ ನಾಶ
ಅಪರೋಕ್ಷಿತನಾಗಿ ತನ್ನ ಯೋಗ್ಯತದಷ್ಟು
ಗೋಪಾಲ ವಿಜಯವಿಠಲನೊಲಿವಾಗ ॥ ೯ ॥

## 8. ತದಧಿಗಮಾಧಿಕರಣ

**ಸೂತ್ರಗಳು :-**

**1. ಓಂ ತದಧಿಗಮ ಉತ್ತರಪೂರ್ವಾಘಯೋರ ಶ್ಲೇಷ ವಿನಾಶೌ, ತದ್ವ್ಯಪದೇಶಾತ್ ಓಂ ॥ ೧೩ ॥**

**2. ಓಂ ಇತರಸ್ಯಾಪ್ಯೇವಮಸಂಶ್ಲೇಷಃ ಪಾತೇ ತು ಓಂ ॥ ೧೪ ॥**

**3. ಓಂ ಅನಾರಬ್ಧಕಾರ್ಯೇ ಏವ ತು ಪೂರ್ವೇ ತದವಧೇಃ ಓಂ ॥ ೧೫ ॥**

**4. ಓಂ ಅಗ್ನಿಹೋತ್ರಾದಿ ತು ತತ್ಕಾರ್ಯಾಯೈವ ತದ್ದರ್ಶನಾತ್ ಓಂ ॥ ೧೬ ॥**

**5. ಓಂ ಅತೋ ಅನ್ಯದಪೀತ್ಯೇಕೇಷಾಮುಭಯೋಃ ಓಂ ॥ ೧೭ ॥**

**6. ಓಂ ಯದೇವ ವಿದ್ಯಯೇತಿ ಹಿ ಓಂ ॥ ೧೮ ॥**

**7. ಓಂ ಭೋಗೇನ ತ್ವಿತರೇ ಕ್ಷಪಯಿತ್ವಾಥ ಸಂಪತ್ಸ್ಯತೇ ಓಂ ॥ ೧೯ ॥**

ಬ್ರಹ್ಮದರ್ಶನವಾದ ಮೇಲೆ ಕರ್ಮಲೇಪವಿಲ್ಲ. "ನಾಭುಕ್ತಂ ಕ್ಷೀಯತೇ ಕರ್ಮ" ಎಂಬಂತೆ. ಮಿಥ್ಯಾಜ್ಞಾನ ತಮಸ್ಸಿಗೆ ಕಾರಣ, ಜ್ಞಾನದಿಂದ ಕರ್ಮಕಳೆದರೂ ಹಿಂದೆ ಅರ್ಜಿತವಾದ ಪ್ರಾರಬ್ಧವನ್ನು ಅನುಭವಿಸಿದ ಮೇಲೆಯೇ ಮುಕ್ತಿ.

**ದಾಸಸಾಹಿತ್ಯ :-**

1. ಎಂದಿಗೆ ನಿನ್ನ ಪಾದ ಕಾಂಬೆ ರಂಗಯ್ಯ ॥ಪ॥
ಎಂದಿಗೆ ನಿನ್ನಪಾದ ಕಂಡೆ ಭಕುತಿಯಿಂದ, ಅಂದಿಗೆ ಭವನಾಶ ತುಂದೇ ಸ್ವಾಮಿ ॥

**(ಶ್ರೀ ವಾಸುದೇವ ವಿಠಲರು)**

2. ಆಧ್ಯಾಪರಾದ ಮಿಥ್ಯಾವಾದ . . . .

**(ಶ್ರೀ ವ್ಯಾಸರಾಯರು)**

3. ಸೋತ್ತಮರ ಅನಿಷ್ಟ ಪುಣ್ಯವೆಂಬೋದು ಭೃತ್ಯರಸುಖಕೆ ಕಾರಣ ವಾಗಿಪುದು.

(ಶ್ರೀಪತಿವಿಠಲರು)

4. ಕರ್ಮದಾಯ ವಿಡಿದು ಕಡೆಗಿಟ್ಟವರ ಕಾಣೋ । ನಿರ್ಮಲಾತ್ಮಕ ವಿಜಯ ವಿಠಲನ್ನು ತಿಳಿ.

(ಶ್ರೀ ವಿಜಯ ವಿಠಲರು)

–o–o–o–

## ಚತುರ್ಥಾಧ್ಯಾಯ - ದ್ವಿತೀಯಪಾದ

### 1. ವಾಙ್ಮನೋಧಿಕರಣ

**ಸೂತ್ರಗಳು :–**

1. ಓಂ ವಾಙ್ಮನಸಿ, ದರ್ಶನಾಚ್ಛಬ್ದಾಚ್ಚ ಓಂ ॥ ೧ ॥

2. ಓಂ ಅತ ಏವ ಚ ಸರ್ವಾಣ್ಯನು ಓಂ ॥ ೨ ॥

ವಾಗಭಿಮಾನಿನ್ಯುಮಾ, ಮನೋಽಭಿಮಾನಿನಿ ರುದ್ರೇ ವಿಲೀಯತೇ" (ಭಾಷ್ಯ) ಪ್ರಕಾರ ವಾಗಭಿಮಾನಿಗಳಾದ ಸೌಪರ್ಣೇಯರು ಮನೋಭಿಮಾನಿಗಳಾದ ಗರುಡ.ಶೇಷ ರಲ್ಲಿ ಲಯ ಹೊಂದುತ್ತಾರೆ. ಸಮಸ್ತ ದೇವತೆಗಳಿಗೂ ತಂತಮ್ಮ ನಿಯಮ್ಯ ನಿಯಮಕಾ ನುಸಾರ ತಂತಮ್ಮ ನಿಯಾಮಕ ದೇವತೆಗಳಲ್ಲಿ ಲಯ ಹೊಂದುತ್ತಾರೆ "ಅಗ್ನಿಸರ್ವದೇ- ವಾ ವಿಲಿಯಂತೇ" ಎಂತಿರೋಃಣದರಿಂದ.

**ದಾಸಸಾಹಿತ್ಯ :**

ಉತ್ತಮರಲ್ಲಿ ನೀಚರ ಲಯ । ದೇವತೆಗಳಿಗೆ ಧನಪ ವಿಷ್ವಸೇನೇಗೆ ವರುಣ । ವರುಣಗೆ ಚಂದ್ರ। ಚಂದ್ರಗೆ ಅನಿರುಧ್ದ । ಅನಿರುದ್ಧ ಸನಕಾದಿಗಳಿಗೆ ಕಾಮ । ಕಾಮಗೆ ವಾರುಣಿ । ವಾರುಣಿಗೆ ಶೇಷ. (ಇದು ಶೇಷ ಮಾರ್ಗವಿದು).

ಅವಶಿಷ್ಟ ದೇವತೆಗಗ್ನಿ, ಅಗ್ನಿಗೆ ಆದಿತ್ಯ । ಸೂರ್ಯಗಾಕಾಶ.ಪೃಥುವಿಗೆ ಅಭಿ- ಮಾನಿಗೆ ಗುರು । ಮಾನುಷೋತ್ತಮರು ಸರ್ವ ಪಿತೃ ನಿಋತಿಗೆ ಯಮನು । ಯಮ ಕೆಲವು ಮನುಗಳು ಪ್ರಿಯವ್ರತಗೆ ಸ್ವಾಯಂಭುವ। ಭೃಗ್ವಾದಿಗೆ ದಕ್ಷ, ಸ್ವಾಯಂಭು ದಕ್ಷ ಗುರುಮರುತಗಳಿಗೆ ಇಂದ್ರ । ಇಂದ್ರಗೆ ಸೌಪರ್ಣಿ, ಸೌಪರ್ಣಿಗೆ ಗರುಡ। (ಗರುಡ- ಮಾರ್ಗವಿದು.)

(ಶ್ರೀ ಗುರು ಪುರಂದರವಿಠಲದಾಸರು)

## 2. ಮನಃ ಪ್ರಾಣಾಧಿಕರಣ

**ಸೂತ್ರ :-**

**1. ಓಂ ತನ್ಮನಃ ಪ್ರಾಣ ಉತ್ತರಾತ್ ಓಂ || ೩ ||**

“ಮನಃ ಪ್ರಾಣೇ” ಇತ್ಯಾದಿ ಶ್ರುತಿಯಿಂದ ಮನೋಭಿಮಾನಿ ದೇವತೆಗೆ ಮುಖ್ಯ ಪ್ರಾಣನಲ್ಲಿ ಲಯವನ್ನು ಹೇಳಿದೆ

**ದಾಸಸಾಹಿತ್ಯ :-**

ಗರುಡ, ಶೇಷಗೆ ವಾಣಿ. ವಾಣಿಗೆ ಚತುರ್ಮುಖನು (ಹಿಂದೆ ಮುಖ್ಯಪ್ರಾಣನಾದವನು) ಆತಗೆ ಕಾಲಬೊಮ್ಮ- ಬೊಮ್ಮಗೆ ಪುನ್ನಾಮಕನು। ಪುನ್ನಾಮಕಗೆ ಶಿರಿದೇವಿ। ಶಿರಿದೇವಿಗೆ ಅಚ್ಯುತನ ಅತಿ ಸಾಮೀಪ್ಯದಿಲಯವು ॥

**(ಶ್ರೀ ಗುರುಪುರಂದರವಿಠಲದಾಸರ ಲಯ ಸುಳಾದಿ)**

## 3. ಅಧ್ಯಕ್ಷಾಧಿಕರಣ

**ಸೂತ್ರ :-**

**1. ಓಂ ಸೋ ಅಧ್ಯಕ್ಷೇ ತದುಪಗಮಾದಿಭ್ಯಃ ಓಂ || ೪ ||**

ಪ್ರಾಣಶಬ್ದೋಕ್ತ ಚತುರ್ಮುಖನಿಗೆ ಶ್ರೀಹರಿಯಲ್ಲಿ ಲಯ ಸಮರ್ಥಿಸುತ್ತಾರೆ.

**ದಾಸಸಾಹಿತ್ಯ :-**

ಗರುಡ ಶೇಷಗೆ ವಾಣಿ, ವಾಣಿಗೆ ಚತುರ್ಮುಖನು । ಆತಗ ಕಾಲಬೊಮ್ಮ ಬೊಮ್ಮಗೆ ಪುನ್ನಾಮಕನು । ಪುನ್ನಾಮಕಗೆ ಶಿರಿದೇವಿ ಶಿರಿದೇವಿಗೆ ಅಚ್ಯುತನ ಅತಿ ಸಾಮಿಪ್ಯದಿ ಲಯವು ॥

**(ಶ್ರೀ ಗುರುಪುರಂದರವಿಠಲದಾಸರ [illegible])**

## 4. ಭೂತಾಧಿಕರಣ

**ಸೂತ್ರ :-**

**1. ಓಂ ಭೂತೇಷು ತಚ್ಛ್ರುತೇಃ ಓಂ || ೫ ||**

“ಭೂತೇಷುದೇವಾವಿಲೀಯಂತೇ ಇತ್ಯುಕ್ತ್ವಾ “ಅಗ್ನೌಸರ್ವೇದೇವಾ ವಿಲೀಯಂತೇ” ಇತ್ಯಾದಿ ಶ್ರುತಿಗಳಿಂದ ವಿಶಿಷ್ಟ ಉಕ್ತರಾದ ದೇವತೆಗಳಿಂದ ಇತರರಾದ ದೇವತೆಗಳು ಪಂಚಭೂತಾಭಿಮಾನಿದೇವತೆಗಳಲ್ಲಿ ಲಯ ಹೊಂದುವರು. ಅಗ್ನಿಯಲ್ಲಿಯೇ ಸಮಸ್ತದೇವತೆ ಗಳಿಗೂಲಯ.

ದಾಸಸಾಹಿತ್ಯ :-

ಉತ್ತಮರಲ್ಲಿ ನೀಚರಲಯ । ದೇವತೆಗಳಿಗೆ ಧನಪ ವಿಷ್ವಕ್ಸೇನಗೆ ವರುಣ ವರುಣಗೆ ಚಂದ್ರ. ಚಂದ್ರಗೆ ಅನಿರುದ್ಧ । ಅನಿರುದ್ಧ ಸನಕಾದಿಗಳಿಗೆ ಕಾಮ ಅವಶಿಷ್ಟ ದೇವತೆಗಳಿಗೆ ಅಗ್ನಿ ಗೆ ಅನಿಲ . . . . ,ಲಯವು

## 5. [illegible]ಧಿಕರಣ

ಸೂತ್ರ :-

1. ಓಂ ಸ್ಯೈಕಸ್ಮಿನ್, ದರ್ಶಯತೋ ಹಿ ಓಂ || ೭ ||

ದೇವತೆಗಳಿಗೆ ಸರ್ವಭೂತದಲ್ಲಿ ಲಯ. ಅಗ್ನಿಯಲ್ಲಿ ಸರ್ವ ದೇವತೆಗಳ ಲಯ. ಅಗ್ನಿಗೆ ವಾಯುವಿನಲ್ಲಿ. ವಾಯುವಿಗೆ ಲಕ್ಷ್ಮಿ. ಲಕ್ಷ್ಮಿಗೆ ಶ್ರೀಹರಿಯಲ್ಲಿ ಲಯ ಹೇಳಿದೆ.

ದಾಸಸಾಹಿತ್ಯ :-

ಉತ್ತಮರಲ್ಲಿ ನೀಚರ ಲಯ । . . . . ಅವಶಿಷ್ಟ ದೇವತೆಗಳಿಗೆ ಅಗ್ನಿ । ಅಗ್ನಿಗೆ ಆದಿತ್ಯ । ಸೂರ್ಯಗಾಕಾಶ, ಪೃಥುವಿಗಭಿಮಾನಿಗೆ ಗುರು . . . . ಗರುಡ ಶೇಷಗೆ ವಾಣಿ ಬ್ರಹ್ಮ . . . . ಶಿರಿದೇವಿ , . . . ಶಿರಿದೇವಿಗೆ ಅಚ್ಯುತನ ಅತಿ ಸಾಮಿಪ್ಯದಿ ಲಯವು.

(ಶ್ರೀ ಗುರುಪುರಂದರವಿಠಲದಾಸರ ಸುಳಾದಿ)

## 6. ಸಮನಾಧಿಕರಣ

ಸೂತ್ರಗಳು :-

1. ಓಂ ಸಮನಾ ಚಾಸೃತ್ಯುಪಕ್ರಮಾದಮೃತತ್ವಂ ಚಾನುಪೋಷ್ಯ ಓಂ || ೭ ||
2. ಓಂ ತದಾಪೀತೇಃ, ಸಂಸಾರವ್ಯಪದೇಶಾತ್ ಓಂ || ೮ ||
3. ಓಂ ಸೂಕ್ಷ್ಮಂ ಪ್ರಮಾಣತಶ್ಚ, ತಥೋಪಲಬ್ಧೇಃ ಓಂ || ೯ ||
4. ಓಂ ನೋಪಮರ್ದೇನಾತಃ ಓಂ || ೧೦ ||
5. ಓಂ ಅಸ್ಯೈವ ಚೋಪಪತ್ತೇರೂಷ್ಮಾ ಓಂ || ೧೧ ||
6. ಓಂ ಪ್ರತಿಷೇಧಾದಿತಿ ಚೇನ್ನ, ಶಾರೀರಾತ್ ಓಂ || ೧೨ ||
7. ಓಂ ಸ್ಪಷ್ಟೋ ಹ್ಯೇಕೇಷಾಂ ಓಂ || ೧೩ ||
8. ಓಂ ಸ್ಮರ್ಯತೇ ಚ ಓಂ || ೧೪ ||

ಲಕ್ಷ್ಮೀದೇವಿಗೆ ವಿಷ್ಣುವಿನಲ್ಲಿ ಲಯಭಾವವನ್ನು ತಿಳಿಸುತ್ತಿದೆ ಲಕ್ಷ್ಮೀದೇವಿಯು ನಿತ್ಯ ಮುಕ್ತಳಾಗಿ ದೇಶಕಾಲದಲ್ಲಿ ಪರಮಾತ್ಮನಿಗೆ ಸಮಳಾದಳೂ ಗುಣದಲ್ಲಿ ಅಸಮಳು ಆದ್ದರಿಂದ ಸರ್ವಥರ್ಮ ಸಾಮ್ಯ ಇಲ್ಲದ ಕಾರಣ ಅವಳಿಗೆ ಹರಿಯಲ್ಲಿ ಲಯಭಾವ, "ಸರ್ವತಃ ಪ್ರಕೃತಿ ಸೂಕ್ಷ್ಮಾಃ" ಎನ್ನುವ ಶ್ರುತಿಯಂತೆ ಲಕ್ಷ್ಮೀನಾರಾಯಣರಿಗೆ ಸರ್ವ ಸಾಮ್ಯವಿಲ್ಲ. ಆದರೆ ನಿತ್ಯಮುಕ್ತಳಾದ ಕಾರಣ ಬ್ರಹ್ಮಾದಿಗಳಂತಲ್ಲ ಅವು ಹೆಚ್ಚಿನವೇ ಆಗಿವೆ ಬ್ರಹ್ಮಾದಿಗಳು ಅಸಮರು ಚಿತ್ಪ್ರಕೃತಿಯು ಸಮಾಸಮಳು ಎಂದು ವರಾಹ ಪುರಾಣದಲ್ಲಿ ಹೇಳಿದೆ.

**ದಾಸಸಾಹಿತ್ಯ :-**

1. ಸಿರಿ ದೇವಿಗೆ ಅಚ್ಯುತನ ಅತಿ ಸಾಮೀಪ್ಯದಿ ಲಯವು

**(ಶ್ರೀ ಗುರುಪುರಂದರವಿಠಲದಾಸರು)**

2. ನಿತ್ಯ ಮುಕ್ತಳೆ ನಿರ್ವಿಕಾರಳೆ । ನಿತ್ಯ ಸುಖ ಸಂಪೂರ್ಣೆ ನಿತ್ಯಾ ।
ನಿತ್ಯ ಜಗದಾಧಾರೆ ಮುಕ್ತಾಮುಕ್ತ ಗುಣವಿನುತ ॥

**(ಹರಿಕಥಾಮೃತಸಾರ)**

3. ಅನಂತಾನಂತ ಗುಣಗಳಿಂದ ಅಧಿಕ ಲಕುಮಿಗೆ
ಆದಿ ಪುರಂದರ ವಿಠಲನಾ । ಘನರು ಸಮರಿಲ್ಲ ಜಗದೊಳು
ಹನುಮ ಹೃತ್ಪದ್ಮವಾಸಿಗೆ ॥

**(ಶ್ರೀ ಪುರಂದರದಾಸರು)**

## 7. ಪರಾಧಿಕರಣ

**ಸೂತ್ರ :-**

**1. ಓಂ ತಾನಿ ಪರೇ, ತಥಾ ಹ್ಯಾಹ ಓಂ** ॥ ೧೫ ॥

"ಸರ್ವದೇವಾಃ" ಚತುರ್ಮುಖನಿಂದ ಇತರರಾದ ದೇವತೆಗಳಿಗೆ ಮೋಕ್ಷದಲ್ಲಿ ಭಗವತ್ ಪ್ರಾಪ್ತಿಯನ್ನು ಸಮರ್ಥಿಸುತ್ತಲಿದೆ.

**ದಾಸಸಾಹಿತ್ಯ :-**

ಜಗಜ್ಜನ್ಮಾದಿ ಕರ್ತ ಗೋವಿಂದ, ಉದರದಿ ಲೋಕ
ಲಘುವಾಗಿ ಧರಿಸಿದ ಮುಕುಂದ, ಭಕ್ತ ಮನಕೆ
ಝಗ ಝಗಿಸುತ ಪೊಳೆವಾನಂದ, ನಿಗಮಾವಳಿಯಿಂದ.

**(ಶ್ರೀ ಗೋಪಾಲದಾಸರು)**

## 8. ಅವಿಭಾಗಾಧಿಕರಣ

**ಸೂತ್ರ :-**

1. ಓಂ ಅವಿಭಾಗೋ, ವಚನಾತ್ ಓಂ || ೧೬ ||

ಜ್ಞಾನಿಗಳು ಮುಕ್ತಿಯಲ್ಲೂ ಕೂಡ ಈಶ್ವರನ ಅಧೀನರೇ ಆಗಿರುತ್ತಾರೆ. ಮುಕ್ತಾವಸ್ಥೆಯಲ್ಲಿ ಜ್ಞಾನಿಗಳಿಗೆ ಸ್ವತಂತ್ರವಿಲ್ಲ.

**ದಾಸಸಾಹಿತ್ಯ :-**

ಸೃಷ್ಟ್ಯಾದಿಕರ್ತ ತ್ರಿಜಗದ್ಭರ್ತ । ಲೋಕೈಕ ಸಮರ್ಥ
ವೃಷ್ಣೀಶ ವೃಂದಾರಕ ರಿಪುಹರ್ತ । ಮುಕುತರ ಪುರುಷಾರ್ಥ
ಹೃಷ್ಟ ಪುಷ್ಟ ಪರಮೇಷ್ಟಿ ಜನಕ । ಶಿಷ್ಯೇಷ್ಟ ದ್ರಷ್ಟ ಅನಿವಿಷ್ಟನಿವಿಷ್ಟ ॥
ಬಾ ವೇಂಕಟ ಶೈಲಾಧಿಪ ಮನ್ಮನಕೆ.

(ಶ್ರೀ ಜಗನ್ನಾಥದಾಸರು)

## 9. ತದೋಕೋ ಧಿಕರಣ

**ಸೂತ್ರಗಳು :-**

1. ಓಂ ತದೋಕೋಗ್ರಜ್ವಲನಂ ತತ್ಪ್ರಕಾಶಿತದ್ವಾರೋ ವಿದ್ಯಾಸಾಮರ್ಥ್ಯಾತ್ತಚ್ಛೇಷಗತ್ಯನುಸ್ಮೃತಿಯೋಗಾಚ್ಚ, ಹಾರ್ದಾನುಗೃಹೀತಃ ಶತಾಧಿಕಯಾ ಓಂ || ೧೭ ||
2. ಓಂ ರಶ್ಮ್ಯನು ಸಾರೀ ಓಂ || ೧೮ ||
3. ಓಂ ನಿಶಿ ನೇತಿ ಚೇನ್ನ, ಸಂಬಂಧಾತ್ ಓಂ || ೧೯ ||
4. ಓಂ ಯಾವದ್ದೇಹಭಾವಿತ್ವಾದ್ದರ್ಶಯತಿ ಚ ಓಂ || ೨೦ ||
5. ಓಂ ಅತಶ್ಚಾಯನೇ ಅಪಿ ಹಿ ದಕ್ಷಿಣೇ ಓಂ || ೨೧ ||

"ಜ್ಞಾನಿನಾಂ ಕರ್ಮಯುಕ್ತಾನಾಂ" ಇತ್ಯಾದಿ ಪ್ರಮಾಣದಂತೆ ಜ್ಞಾನಿಗಳ ಮರಣ ಅಜ್ಞಾನಿಗಳ ಮರಣಕ್ಕಿಂತ ವೈಲಕ್ಷಣ ಉಳ್ಳದ್ದಾಗಿದೆ. ಬ್ರಹ್ಮನಾಡಿಯಿಂದ ಜ್ಞಾನಿಗೆ ಶರೀರದಿಂದ ಸಂಕ್ರಾಂತಿ ದೇವತೆಗಳಿಗೆ ಸೋತ್ತಮರಲ್ಲಿ ಪ್ರವೇಶದಿಂದ ದೇಹಲಯವು ಮನುಷ್ಯೋತ್ತಮರಿಗೆ ದೇಹದಿಂದ ಉತ್ಕ್ರಮಣ.

**ದಾಸಸಾಹಿತ್ಯ :-**

ಮಮತೆಯ ತೊರೆದು ಮೇಲೊಂದಪೇಕ್ಷಿಸದೆ
ಸಮ ವಿಷಮ ತಿಳಿದೊಂದೇ ಭಕುತಿಯಲ್ಲಿ

ಸಮಾಧಿಗೊಳಗಾಗಿ ಧಿವ್ಯದೃಷ್ಟೀಲಿ ಸರ್ವ
ಕ್ರಮ ಅನುಕ್ರಮದಿಂದ ಭಾವಪೂರಿತನಾಗೋ ॥ ೮ ॥

ಈಪರಿ ಧೇನಿಸಲು ದೇವ ಕರುಣವ ಮಾಡೆ
ಪಾಪ ಸಂಚಿತವು ಪ್ರಾರಬ್ಧ ನಾಶ
ಅಪರೋಕ್ಷಿತನಾಗಿ ತನ್ನ ಯೋಗ್ಯತದಷ್ಟು
ಗೋಪಾಲ ವಿಜಯ ವಿಠಲ ಒಲಿವನಾಗ ॥ ೯ ॥

(ಶ್ರೀ ವಿಜಯದಾಸರು)

2. ಮಾನುಷೋತ್ತಮರಿಗಧಿಕ ಕ್ಷಿತಿಪರು ಮಾನು ಷದೇವ ಗಂಧರ್ವರು ಜಾನ ಪಿತರಾಜಾನ ಕರ್ಮಜ ದಾನವಾರು ತತ್ವೇಶರು.

(ತಾರತಮ್ಯ - ಶ್ರೀ ಪುರಂದರದಾಸರು)

## 10. ಯೋಗ್ಯಧಿಕರಣ

**ಸೂತ್ರ :-**

**1. ಓಂ ಯೋಗೀನಃ ಪ್ರತಿ ಸ್ಮರ್ಯತೇ**
**ಸ್ಮಾರ್ತೋ ಚೈತೇ ಓಂ** ॥ ೨೨ ॥

ಬ್ರಹ್ಮ ಪ್ರಾಪ್ತಿಯಾಗುವುದಕ್ಕೆ ಗತ್ಯಸು ಸ್ಮರಣಾದಿಗಳು ಅವಶ್ಯಕ. "ಯಂಯಂ ವಾ ಅಪಿ" ಎಂಬ ಶ್ರುತಿಯಲ್ಲಿ ಶರೀರ ತ್ಯಾಗಕಾಲದಲ್ಲಿ ಸ್ಮೃತವಾದುದಕ್ಕೇನೇ ಪ್ರಾಪ್ಯತ್ವ ಹೇಳುತ್ತದೆ.

**ದಾಸಸಾಹಿತ್ಯ :-**

ನಾರಾಯಣ ನಿನ್ನ ನಾಮ । ಎನ್ನ ನಾಲಿಗೆ ಮೇಲಿರಬೇಕೆಂಬ ನೇಮ ।
ಪ್ರಾಣಪಯಣ ಸಮಯಕ್ಕೊದಗಲೋ । ಗುಣಧಾಮ । ಅಚ್ಯುತಾನಂತ ಗೋವಿಂದ ॥

(ಶ್ರೀ ಕನಕದಾಸರು)

0-0-0-0-0

# ಚತುರ್ಥಾಧ್ಯಾಯ ತೃತೀಯಪಾದ

## 1. ಅರ್ಚಿರಾದ್ಯಧಿಕರಣ

**ಸೂತ್ರ :-**

**1. ಓಂ ಅರ್ಚಿರಾದಿನಾ, ತತ್ಪ್ರಥಿತೇಃ ಓಂ || ೧ ||**

ಪರಬ್ರಹ್ಮನನ್ನು ಹೊಂದುವ ಜ್ಞಾನಿಯು "ತೇ ಅರ್ಚಿಷಮಭಿ ಸಂಭವಂತಿ" ಎಂದು ಹೇಳಿದ ಪ್ರಕಾರ ಅರ್ಚಿರಾದಿ ಮಾರ್ಗದಲ್ಲಿ ಹೋಗುತ್ತಾರೆ. "ಸ ವಾಯು-ಮಾಗಚ್ಛತಿ" ಎಂಬುದು ತದನಂತರವೇ ಹೊರತು ಮೊದಲಲ್ಲ.

**ದಾಸಸಾಹಿತ್ಯ :-**

ಘನ ಪೂಜೆಯಿದು ಕಾಣೋ ಆಲೋಚಿಸಿ ನೋಡಿ । ಗುಣಾತೀತ ವಿಜಯ ವಿಠಲನ ಪಾದದಲ್ಲಿರು ||

## 2. ವಾಯುಶಬ್ದಾಧಿಕರಣ

**ಸೂತ್ರ :-**

**1. ಓಂ ವಾಯುಶಬ್ದಾತ್, ಅವಿಶೇಷವಿಶೇಷಾಭ್ಯಾಂ ಓಂ || ೨ ||**

ಅರ್ಚಿ ಲೋಕ ಪ್ರಾಪ್ತ್ಯಾನಂತರವೇ ವಾಯುಲೋಕ ಪ್ರಾಪ್ತಿ ಎಂಬುದೇ ಸಹಜ

**ದಾಸಸಾಹಿತ್ಯ–:**

ಶ್ರೀ ವಿಜಯದಾಸರ ಮುಕ್ತರ ಸುಳಾದಿ

## 3. ತಟಿದಧಿಕರಣ

**ಸೂತ್ರ :-**

**1 ಓಂ ತಟಿತೋಽಧಿವರುಣಃ, ಸಂಬಂಧಾತ್ ಓಂ || ೩ ||**

ತಟಿದಭಿಮಾನಿ ದೇವತಾಲೋಕ ಪ್ರಾಪ್ತಿಯಾದ ನಂತರ ವರುಣಲೋಕಪ್ರಾಪ್ತಿ

**ದಾಸಸಾಹಿತ್ಯ :–**

ಶ್ರೀ ವಿಜಯದಾಸರ ಮುಕ್ತರ ಸುಳಾದಿ.

## 4. ಆತಿವಾಹಿಕಾಧಿಕರಣ

**ಸೂತ್ರಗಳು :-**

**1. ಓಂ ಆತಿವಾಹಿಕಸ್ತಲ್ಲಿಂಗಾತ್ ಓಂ || ೪ ||**

2. ಓಂ ಉಭಯವ್ಯಾಮೋಹಾತ್ತತ್ಸಿದ್ಧೇಃ ಓಂ || ೫ ||

ಆರ್ಚಿಲೋಕ ಪ್ರಾಪ್ತ್ಯಾನಂತರ ವಾಯುವಿಗೆ ಅತಿವಾಹಿಕತ್ವ ಸಮರ್ಥಿಸುತ್ತಿದ್ದಾರೆ. ಆತನೇ ಮುಖ್ಯಪ್ರಾಣನು.

**ದಾಸಸಾಹಿತ್ಯ :-**

ವಿಜಯದಾಸರ ಮುಕ್ತ ಸುಳಾದಿ.

## 5. ವೈದ್ಯುತಾಧಿಕರಣ

**ಸೂತ್ರ :-**

1. ಓಂ ವೈದ್ಯುತೇನೈವ ತತಸ್ತಚ್ಛ್ರುತೇಃ ಓಂ || ೬ ||

ಬ್ರಹ್ಮಪ್ರಾಪ್ತಿ ಮಾರ್ಗದಲ್ಲಿ ಮುಖ್ಯವಾಯುವೆ ಅಂತಿಮನು ಇವನಿಗಿಂತ ದೊಡ್ಡವರಿಲ್ಲ.

**ದಾಸಸಾಹಿತ್ಯ :-**

ವಾಯುವಿಗೆ ಸಮರಿಲ್ಲ ಜಗದೊಳು ವಾಯುದೇವರೇ ಬ್ರಹ್ಮರು ವಾಯು ಬ್ರಹ್ಮಗೆ ಕೋಟಿಗುಣಗಳಿಂದಧಿಕ ಶಕ್ತಳು ಶ್ರೀರಮಾ.

(ಶ್ರೀ ಪುರಂದರದಾಸರು)

## 6. ಕಾರ್ಯಾಧಿಕರಣ

**ಸೂತ್ರಗಳು :-**

1. ಓಂ ಕಾರ್ಯಂ ಬಾದರಿಃ, ಅಸ್ಯ ಗತ್ಯುಪಪತ್ತೇಃ ಓಂ || ೭ ||
2. ಓಂ ವಿಶೇಷಿತತ್ವಾಚ್ಚ ಓಂ || ೮ ||
3. ಓಂ ಸಾಮೀಪ್ಯಾತ್ತು ತದ್ವ್ಯಪದೇಶಃ ಓಂ || ೯ ||
4. ಓಂ ಕಾರ್ಯಾತ್ಯಯೇ ತದಧ್ಯಕ್ಷೇಣ ಸಹಾತಃ ಪರಮಭಿಧಾನಾತ್ ಓಂ || ೧೦ ||
5. ಓಂ ಸ್ಮೃತೇಶ್ಚ ಓಂ || ೧೧ ||
6. ಓಂ ಪರಂ ಜೈಮಿನಿಃ, ಮುಖ್ಯತ್ವಾತ್ ಓಂ || ೧೨ ||
7. ಓಂ ದರ್ಶನಾಚ್ಚ ಓಂ || ೧೩ ||
8. ಓಂ ನ ಚ ಕಾರ್ಯೇ ಪ್ರತಿಪತ್ತ್ಯಭಿಸಂಧಿಃ ಓಂ || ೧೪ ||

**9. ಓಂ ಅಪ್ರತೀಕಾಲಂಬ ನಾನ್ನಯತೀತಿ**
**ಬಾದರಾಯಣಃ, ಉಭಯಥಾ ಚ ದೋಷಾತತ್ಕ್ರತುಶ್ಚ ಓಂ ।೧೫॥**

**10. ಓಂ ವಿಶೇಷಂ ಚ ದರ್ಶಯತಿ ಓಂ ।೧೬॥**

ವಾಯುದೇವರೇ ಬ್ರಹ್ಮನನ್ನು ಹೊಂದಿಸಿಕೊಡುತ್ತಾರೆ. "ಸ ಏನಾನ್ ಬ್ರಹ್ಮ ಗಮಯತಿ" ಹಾಗೂ "ಬ್ರಹ್ಮ ವಿದಾಪ್ನೋತಿಪರಂ" ಇತ್ಯಾದಿ ಶ್ರುತಿಗಳಿಗೆ ಸಮನ್ವಯ ಎಂದರೆ ವಾಯುದೇವರು ಅಧಿಕಾರ ಭೇದದಿಂದ ಕಾರ್ಯ ಬ್ರಹ್ಮ ಮತ್ತು ಪರಬ್ರಹ್ಮ ಉಭಯಪರವೆನ್ನುವುದೇ ಸರಿ.

**ದಾಸಸಾಹಿತ್ಯ :-**

ಜ್ಞಾನಭಕ್ತ್ಯಾದ್ಯಖಿಳಗುಣ ಚತು । ರಾನನೊಲಳಿಪ್ಪಂತೆ ಮುಖ್ಯ
ಪ್ರಾಣನಲಿ ಚಿಂತಿಪುದು ಯತ್ಕಿಂಚಿತ್ತು ಕೊರತೆಯಾಗಿ ॥
ನ್ಯೂನ ಋಜುಗಣ ಜೀವರಲ್ಲಿ ಕ್ರ
ಮೇಣ ವೃದ್ಧಿ ಜ್ಞಾನ ಭಕುತಿ ಸ
ಮಾನ ಭಾರತಿ ವಾಣಿಗಳಲಿ ಪದ ಪ್ರಯುಕ್ತಧಿಕ ॥

(ಶ್ರೀ ಹರಿಕಥಾಮೃತಸಾರ)

೦-೦.೦-೦-೦

## ಚತುರ್ಥಾಧ್ಯಾಯ - ಚತುರ್ಥಪಾದ

### 1. ಸಂಪತ್ಯಾಧಿಕರಣ

**ಸೂತ್ರ :-**

**1. ಓಂ ಸಂಪದ್ಯಾವಿಹಾಯ ಸ್ವೇನ, ಶಬ್ದಾತ್ ಓಂ ॥೧॥**

ಜ್ಞಾನಿಯಾದವನು ಪರಬ್ರಹ್ಮನನ್ನು ಹೊಂದಿ ಸ್ವಯೋಗ್ಯಭೋಗವನ್ನು ಅನು-ಭವಿಸುತ್ತಾನೆ.

**ದಾಸಸಾಹಿತ್ಯ :-**

1. ಜನರೊಳಗೆ ನೀನಿದ್ದು ಜನುಮ ಜನುಮದಲಿ ಗುಣ ಕಾಲಕ್ರಿಯ ಸ್ವಭಾವ ಗಳನುಸರಿಸಿ ಪುಣ್ಯ ಪಾಪಗಳೀವ ಸ್ವಾಮಿ ನಿನ್ನ ಸಂಕಲ್ಪಾನುಸಾರ ಮಾಡೊ.

(ಶ್ರೀಜಗನ್ನಾಥದಾಸರು)

2. ಅವರವರ ಯೋಗ್ಯತೆಯನನುಸರಿಸಿ ಅವರಿಗೊಲಿವೆ ಅವನೀಶ ಪುರಂದರ ವಿಠಲ ತವದಯವೇ ಸಾಧನವು.

(ಶ್ರೀಪುರಂದರದಾಸರು)

## 2. ಮುಕ್ತಾಧಿಕರಣ

ಸೂತ್ರ :-

1. ಓಂ ಮುಕ್ತಃ, ಪ್ರತಿಜ್ಞಾನಾತ್ ಓಂ ॥ ೨ ॥

"ಸತತ್ರ ಪರ್ಯೇತಿ" ಎನ್ನುವ ಶ್ರುತಿಯಂತೆ ಭೋಗವನ್ನು ಭೋಗಿಸತಕ್ಕವನು ಮುಕ್ತನೆ ಎನ್ನುತ್ತಾರೆ.

ದಾಸಸಾಹಿತ್ಯ :-

ಮುಕ್ತ ಬಿಂಬನು ತುರಿಯಜೀವ । ನ್ಮುಕ್ತ ಬಿಂಬನು ವಿಶ್ವಭವ ಸಂ ।
ಸಕ್ತ ಬಿಂಬನು ತೈಜಸನು ಆ ಸೃಜ್ಯರಿಗೆ ಪ್ರಾಜ್ಞ ।
ಶಕ್ತನಾದರೂ ಸರಿಯ ಸರ್ವೋ। ದ್ರಿಕ್ತ ಮಹಿಮನು ದುಃಖಸುಖಗಳ ।
ವ್ಯಕ್ತ ಮಾಡುತಲಿಪ್ಪ ಕಲ್ಪಾಂತದಲಿ ಬಪ್ಪರಿಗೆ ।

ಆದಿ ಮಧ್ಯಾಂತಗಳು ಇಲ್ಲದ । ಮಾಧವಗಿದು ಪಚಾರವೆಂದು ಋ
ಗಾದಿ ವೇದ ಪುರಾಣಗಳು ಪೇಳುವುವು ನಿತ್ಯದಲಿ ।
ಪೋಥ ಮಯಾನುಗ್ರಹವ ಸಂ । ಪಾದಿಸಿ ರಮಾ ಬ್ರಹ್ಮರುದ್ರೇಂ
ದ್ರಾದಿಗಳು ತಮ್ಮ ತಮ್ಮ ಪದವಿಯ ನೈದಿ ಸುಖಿಸುವರು ॥

(ಹರಿಕಥಾಮೃತಸಾರ)

## 3. ಆಕಾಶಾಧಿಕರಣ

ಸೂತ್ರ:-

ಓಂ ಆಕಾಶ ಪ್ರಕರಣಾತ್ ಓಂ ॥ ೩ ॥

"ಪರಂಜ್ಯೋತಿ ಪರಂಬ್ರಹ್ಮ" ಎನ್ನುವ ಶ್ರುತಿಯಂತೆ ಪರಂಜ್ಯೋತಿ ಶಬ್ದ ಪರಮಾತ್ಮನಲ್ಲಿಯೇ ಮುಖ್ಯ ಸಮನ್ವಯವೇ ಹೊರತು ಸೂರ್ಯಾದಿಗಳಲಲ್ಲ.

ದಾಸಸಾಹಿತ್ಯ:-

ಜ್ಯೋತಿರೂಪಗೆ ಪ್ರತಿಮೆಗಳು ಸಾಂ । ಕೇತಿಕಾರೋಪಿತ ಸಪೌರುಷ
ಧಾತು ಸಪ್ತಕ ಧೈರ್ಯ ಶೌರ್ಯ ಔದಾರ್ಯ ಚಾತುರ್ಯ
ಮಾತು ಮಾನ ಮಹತ್ವ ಸಹನ ಸು । ನೀತಿ ನಿರ್ಮಲ ದೇಶ ಬ್ರಾಹ್ಮಣ
ಭೂತ ಪಂಚಕ ಬುದ್ಧಿ ಮೊದಲಾದಿಂದ್ರಿಯ ಸ್ಥಾನ ॥

(ಹರಿಕಥಾಮೃತಸಾರ)

## 4. ಅವಿಭಾಗಾಧಿಕರಣ

**ಸೂತ್ರ:-**

**ಓಂ ಅವಿಭಾಗೇನ, ದೃಷ್ಟತ್ವಾತ್ ಓಂ ||೪||**

ಸಾಯುಜ್ಯರೂಪ ಮೋಕ್ಷವನ್ನು ಹೊಂದಿದವರಿಗೆ ಶ್ರೀಹರಿಯಿಂದ ಭುಕ್ತವಾಥ ಭೋಗ ಭೋಕ್ತೃತ್ವವನ್ನು ತಿಳಿಸುತ್ತಿದೆ. "ಪೂರ್ಣಾನಂದಃ ಪೂರ್ಣಭುಕ್, ಪೂರ್ಣ ಕರ್ತಾ" ಎನ್ನುವ ಶ್ರುತಿಯು ಶ್ರೀಹರಿಗೆ ಸಮಷ್ಟ್ವಯ.

**ದಾಸಸಾಹಿತ್ಯ:-**

ಮುಖ್ಯ ಕಾರಣ ವಿಷ್ಣು ಸ್ವತಂತ್ರನೆ ಸತ್ಯ || ಪ ||
ಸಖ್ಯರ ಪೋಷ ಸಿರಿ ಅಜಭವ ಅವರೇಶ || ಅ ||

ತಿಳಿವೆಂಬುವ ನೀನೆ. ತಿಳಿದು ತಿಳಿಸುವ ನೀನೆ, ತಿಳಿದ ವಸ್ತುವು ನೀನೆ, ತೀರ್ಥ ಪದನೆ । ತೀದುದಕೆ ಫಲ ನೀನೆ, ತಿಳಿಯಗೊಡದವ ನೀನೆ, ತಿಳಿವ ಸ್ವತಂತ್ರ ನಿನ್ನ-ದೋ, ತಿಳಿಸೊ ಸರ್ವೇಶ || ||೧||

ತಿಳಿಯನ್ನುವುದಕ್ಕಾಗಿ ತಿಳಿಯತಕ್ಕದ್ದು ನೀನೆ । ತಿಳಿಸೊ. ಸ್ವೋತ್ತಮರೆಲ್ಲ ತಿಳಿದ ಶೇಷ, ತಿಳಿವಲ್ಲಿ ತಿಳಿಪಲ್ಲಿ ತಿಳಿವಳಿಕೆ ನೀನಾಗಿ ಚಲಿಸಿದಲೆ ಮನ ನಿಲ್ಲಿಸೋ ಗೋಪಾಲವಿಠಲ.

**(ಶ್ರೀ ಗೋಪಾಲದಾಸರು)**

## 5. ಬ್ರಾಹ್ಮಾಧಿಕರಣ

**ಸೂತ್ರಗಳು :-**

**1. ಓಂ ಬ್ರಾಹ್ಮೇಣ ಜೈಮಿನಿಃ, ಉಪನ್ಯಾಸಾದಿಭ್ಯಃ ಓಂ ||೫||**

**2. ಓಂ ಚಿತಿಮಾತ್ರೇಣ ತದಾತ್ಮಕತ್ವಾತ್, ಇತ್ಯೌಡುಲೋಮಿಃ ಓಂ ||೬||**

**3. ಓಂ ಏವಮಪ್ಯುಪನ್ಯಾಸಾತ್, ಪೂರ್ವಭಾವಾದವಿರೋಧಂ, ಬಾದರಾಯಣಃ ಓಂ ||೭||**

ಸಾಯುಜ್ಯವನ್ನು ಹೊಂದಿರುವ ಮುಕ್ತರು ಶರೀರವಿಲ್ಲದಿದ್ದರೂ ಭೋಗವನ್ನು ಅನುಭವಿಸುತ್ತಾರೆ. "ಚಿನ್ಮಾತ್ರ ಏವೈಷ ಭವತಿ" ಎಂಬುವ ಶ್ರುತಿಯಂತೆ ಮುಕ್ತರು ಚಿನ್ಮಾತ್ರ ಶರೀರದಿಂದಲೇ ಭೋಗವನ್ನು ಅನುಭವಿಸುತ್ತಾರೆ ಹಾಗೂ ಕರ್ಮವನ್ನೂ ಮಾಡುತ್ತಾರೆ.

ದಾಸಸಾಹಿತ್ಯ :-

1. ತಾರಕ ಹರಿ ಮುಖ್ಯ ಕಾರಣಕರ್ತ । ಮುರಾರಿ ಭೊಮ್ಮ ಕಾರಣ ನೆನ-ದಿರಿ । ಆರಾರಿಗೊರಗಳು ನೀವರು ಇವರೆಲ್ಲ । ಬಾರದಿದ್ದರೆ ಸರಿ ಹರಿ ಕರದೊಟ್ಟುವ। ಘೀರಶಕ್ಯರು ಅಲ್ಲ ಈ ಶಕ್ತಿಯು ಒಬ್ಬ । ರಾರಾದರೂ ವಿಚಾರಿಸಿನೋಡಲು । ಭಾರ-ನಿಳಹೇ ಭೂನೇವಿಯ ಗೇಳ್ಳಿವ । ತಾರಮಾಡುವ ಜೀವರ ಉದ್ಧರಿಸಲು ಈರೇಳು ಜಗವಶೃಷ್ಟಿಸಿ ಒಡನಿದ್ದು । ಆರಭಾರಕೆಯೆಲ್ಲ ಕಾರಣನಾಗಿಹ । ಈರೀತಿ ಸೃಷ್ಟಿಸ್ಥಿತಿ-ಲಯ ವ್ಯಾಪಾರವೆಲ್ಲ । ಮಾರ್ರನಯ್ಯಗೆ ಕ್ರೀಡೆ ನಾರಿಗೆ ಸಂಪತ್ತು । ಮೂರುವಿಧ ಜೀವರಿಗೆಲ್ಲ ಭೋಗ । ನಾರಾಯಣನ ವ್ಯಾಪಾರವಯ್ಯಾ । ವಾರಿಜಭವನಯ್ಯ ಗೋಪಾಲವಿಠಲ ದೂರಕ್ಕೆ ದೂರತಿ ಸಾರೆಗೆಸಾರ್ಯ ।

2. ಎಂತೆಂತು ತನ್ನನ್ನು ಭಜನಿಯ ಮಾಳ್ಪರಿಗೆ । ಅಂತಂತೆ ಆಗಿ ಪೊಳೆವ ಗೋಪಾಲವಿಠಲ ॥

(ಶ್ರೀ ಗೋಪಾಲದಾಸರು)

3. ಅನಲಾಂಗಾರ ದೊಳಿಪ್ಪೋಪಾದಿಲಿ । ಅನಿರುದ್ಧನು ಚೇತನರೊಳಗೆ । ಕ್ಷಣಬಿಟ್ಟಗಲದೆ ಏಕೋನಾರಾ । ಯಣ ಶ್ರುತಿ ಪ್ರತಿಪಾದ್ಯನು ಇಹನೆಂಬುದೇ ಫಲವಿದು ಬಾಳ್ದುದಕೆ.

(ಶ್ರೀ ಜಗನ್ನಾಥದಾಸರು)

4. ಸೃಷ್ಟ್ಯಾದಿಕರ್ತ ತ್ರಿಜಗದ್ಭರ್ತ । ಲೋಕೈಕ ಸಮರ್ಥ
ವೃಷ್ಣೀಶ ವೃಂದಾರಕ ರಿಪುಹರ್ತ । ಮುಕುತರ ಪುರುಷಾರ್ಥ
ಹೃಷ್ಟ ಪುಷ್ಟ ಪರಮೇಷ್ಟಿ ಜನಕ । ಶಿಷ್ಟೇಷ್ಟ ದ್ರಷ್ಟ ಅನಿವಿಷ್ಟನಿವಿಷ್ಟ॥
ಬಾ ವೆಂಕಟ ಶೈಲಾಧಿಪ ಮನ್ಮನಕೆ । ತಡಮಾಡುವುದೇಕೆ.

(ಶ್ರೀ ಜಗನ್ನಾಥದಾಸರು)

## 6. ಸಂಕಲ್ಪಾಧಿಕರಣ

ಸೂತ್ರ :-

**1. ಓಂ ಸಂಕಲ್ಪಾದೇವ ಚ, ತಚ್ಛ್ರುತೇಃ ಓಂ । ೮ ॥**

ಮುಕ್ತನಿಗೆ ಸಂಕಲ್ಪಮಾತ್ರದಿಂದಲೇ ಸಕಲ ಭೋಗಗಳೂ ಸಾಧ್ಯವಾಗುತ್ತದೆ. "ಎಂಬ ಶ್ರುತಿಯಂತೆ ಸಾಧ್ಯ.

ದಾಸಸಾಹಿತ್ಯ :-

1. ಸಿದ್ಧ ಸಾಧನವಿಮ ಬಿಂಬಕಾಣುವುದಕ್ಕೆ । ಪದ್ಮಿನೀವಲ್ಲಭ ನಮ್ಮವಿಜಯ

ವಿಠಲಪ್ರಾಪ್ತಿ.

(ಶ್ರೀ ವಿಜಯದಾಸರು)

**ದಾಸಸಾಹಿತ್ಯ :-**

ಸತತ ಕಲ್ಯಾಣ ಅಚ್ಯುತ ಭಟರಿಗೆ ॥ ಪ ॥

ರತಿ ಪತಿ ಪಿತನಂಘ್ರಿ ರತ ಮಹಾತ್ಮರಿಗೆ ॥ ಅ ॥

ಆದಿವ್ಯಾಧಿಗಳಿಲ್ಲ, ಅಶುಭಮಾರ್ಗಗಳಿಲ್ಲ । ಕ್ರೋಧನೃಪ ಭಯವಿಲ್ಲ ಕಾಕುಮತಿ ಇಲ್ಲ । ಬೇದ ಮೋದಗಳಿಲ್ಲ ಪನ್ನಗಯು ಮುಖಿಕಿಲ್ಲ । ಶ್ರೀಧವನ ನವವಿಧ ಭಕುತಿ ಶೀಲರಿಗೆ ॥ . . . . ಶ್ರೀಪ್ರಸನ್ನವೇಂಕಟೇಶನ ಭಜಿಪ ಭಕುತರಿಗೆ.

(ಶ್ರೀ ಪ್ರಸನ್ನವೆಂಕಟದಾಸರು)

## 7. ಅನನ್ಯಾಧಿಪತ್ಯಧಿಕರಣ

**ಸೂತ್ರ :-**

**1. ಓಂ ಅತ ಏವ ಚಾನನ್ಯಾಧಿಪತಿ: ಓಂ**

ಮುಕ್ತರಿಗೆ ತಮ್ಮಿಂದ ಅಧಮರಾದವರು ನಿಯಾಮಕರಾಗುವುದಿಲ್ಲ. "ಪರಮಃ ಅಧಿಪತಿ ಸ್ತೇಷಾಂ" ಇತ್ಯಾದಿ ಶ್ರುತಿಯಂತೆ.

**ದಾಸಸಾಹಿತ್ಯ :-**

1. ಹರಿ ಸಿರಿ ವಿರಂಚೀರ ಮುಖ ನಿ । ರ್ಜರರ ಆವೇಶಾವ ತಾರ್ಗಗಳ । ಸ್ಮರಿಸು ಗುಣಗಣ ಸರ್ವಕಾಲದಿ ಭಕ್ತಿ ಪೂರ್ವಕದಿ ॥

(ಶ್ರೀ ಹರಿಕಥಾಮೃತಸಾರ)

2. ಸತ್ಯ ಜಗಕಿದು ಪಂಚಭೇಧವು ನಿತ್ಯ ಶ್ರೀಗೋವಿಂದನ ಕೃತ್ಯ ತಿಳಿದು ತಾರತಮ್ಯದಿ ಕೃಷ್ಣನಧಿಕೆಂದು ಸಾರಿರೈ.

(ಶ್ರೀ ಪುರಂದರದಾಸರು)

3. ದೇವದೈತ್ಯರ ತಾರತಮ್ಯವ । ನೀ ವಿಧದಿ ತಿಳಿದಲ್ಲ ರೊಳು ಲ-
ಕ್ಷ್ಮೀವರನೆ ಸರ್ವೋತ್ತಮನು ಎಂದರಿದು ನಿತ್ಯದಲಿ ॥
ಸೇವಿಸುವ ಭಕ್ತರಿಗೊಲಿದು ಸುಖ । ವೀವ ಸರ್ವತ್ರದಲಿ ಸುಖಮಯ
ಶ್ರೀ ವಿರೂಚಾದ್ಯಮರನುತ ಜಗನ್ನಾಥವಿಠಲನು ॥

## 8. ಅಭಾವಾಧಿಕರಣ

**ಸೂತ್ರಗಳು :-**

**1 ಓಂ ಅಭಾವಂ ಬಾದರಿರಾಹ ಹ್ಯೇವಮ್ ಓಂ** ॥ ೧೦ ॥

2. ಓಂ ಭಾವಂ ಜೈಮಿನಿ:, ವಿಕಲ್ಪಾಮ್ನಾನಾತ್ ಓಂ || ೧೧ ||

3. ಓಂ ದ್ವಾದಶಾಹವದುಭಯವಿಧಂ ಬಾದರಾಯಣಃ ಅತಃ ಓಂ || ೧೨ ||

4. ಓಂ ತನ್ವಭಾವೇ ಸಂಧ್ಯವದುಪಪತ್ತೇಃ ಓಂ || ೧೩ ||

5. ಓಂ ಭಾವೇಜಾಗ್ರದ್ವತ್ ಓಂ || ೧೪ ||

6. ಓಂ ಪ್ರದೀಪವದಾವೇಶಸ್ತಥಾ ಹಿ ದರ್ಶಯತಿ ಓಂ || ೧೫ ||

7. ಓಂ ಸ್ವಾಪ್ಯಯಸಂಪತ್ತ್ಯೋರನ್ಯತರಾಪೇಕ್ಷ ಮಾವಿಷ್ಕೃತಂ ಹಿ ಓಂ || ೧೬ ||

"ಅಶರೀರೋವಾವತದಾಭವತಿ" ಎಂಬ ಶ್ರುತಿಯಂತೆ ಮುಕ್ತರಿಗೆ ಪ್ರಾಕೃತ ದೇಹ ಇರುವುದಿಲ್ಲ ಚಿನ್ಮಾತ್ರ ಶರೀರ ಇರುವುದು ದೇಹವಿದ್ದರೆ ದುಃಖ ಕೊಡುವುದು ಎಂದರೆ ಮುಕ್ತರು ಚಿನ್ಮಾತ್ರ ಶರೀರದಿಂದಲೇ ಭೋಗವನ್ನು ಅನುಭವಿಸುವರು.

**ದಾಸಸಾಹಿತ್ಯ :-**

ಶ್ರೀವಿಜಯದಾಸರ ಮುಕ್ತರ ಸುಳಾದಿ.

## 9. ಜಗದ್ವ್ಯಾಪಾರಾಧಿಕರಣ

**ಸೂತ್ರಗಳು :-**

1. ಓಂ ಜಗದ್ವ್ಯಾಪಾರ ವರ್ಜಂ ಓಂ || ೧೭ ||

2. ಓಂ ಪ್ರಕರಣಾದ ಸನ್ನಿಹಿತತ್ವಾಚ್ಚ ಓಂ || ೧೮ ||

3. ಓಂ ಪ್ರತ್ಯಕ್ಷೋಪದೇಶಾದಿತಿ ಚೇನ್ನಾಧಿ ಕಾರಿಕ ಮಂಡಲಸ್ಥೋಕ್ತೇಃ ಓಂ || ೧೯ ||

4. ಓಂ ವಿಕಾರಾವರ್ತಿ ಚ ತಥಾ ಹಿ ದರ್ಶಯತಿ ಓಂ || ೨೦ ||

ಜಗತ್ತಿನ ಸೃಷ್ಟ್ಯಾದಿ ವ್ಯಾಪಾರಗಳನ್ನು ಬಿಟ್ಟು ಇತರ ಕಾಮಗಳನ್ನು ಮುಕ್ತರು ಹೊಂದುತ್ತಾರೆ. ಮುಕ್ತಿಯಲ್ಲಿ ಮುಕ್ತ ಚತುರ್ಮುಖನಿಗೆ ಸರ್ವಮುಕ್ತರನಿಯಮನ ವ್ಯಾಪಾರವೂ, ಇತರ ದೇವತೆಗಳಿಗೆ ತಮ್ಮಿಂದ ಅವರರಾದ ಮುಕ್ತರ ನಿಯಮನ ವ್ಯಾಪಾರವೂ ಇದೆ.

**ದಾಸಸಾಹಿತ್ಯ :-**

ಶ್ರೀ ವಿಜಯದಾಸರ ಮುಕ್ತರ ಸುಳಾದಿ.

## 10. ಸ್ಥಿತ್ಯಧಿಕರಣ

ಸೂತ್ರ :-

1. ಓಂ ಸ್ಥಿತಿಮೂಹ ದರ್ಶಯತಿಶ್ಚೈವಂ
ಪ್ರತ್ಯಕ್ಷಾನುಮಾನೇ ಓಂ || ೨೦ ||

2. ಓಂ ಭೋಗಮಾತ್ರಸಾಮ್ಯ ಲಿಂಗಾಚ್ಚ ಓಂ || ೨೨ ||

ಪರಬ್ರಹ್ಮನನ್ನು ಹೊಂದತಕ್ಕ ಮುಕ್ತರಿಗೆ ಭೋಗಾದಿಗಳಿಂದ ವೃದ್ಧಿ ಹ್ರಾಸಗಳು ಇಲ್ಲ. "ಮುಕ್ತೋನ ವೃದ್ಧ್ಯಾದಿಮಾನ್ ತದ್ಧೇತು ಶೂನ್ಯತ್ವಾತ್" ಹಾಗೂ ನ ಹ್ರಾಸೋ ನಚವೃದ್ಧಿರ್ವಾ "ಇತ್ಯಾದಿ ಸ್ಮೃತಿಗಳಂತೆ ಆದ್ದರಿಂದ ಮುಕ್ತರ ಆನಂದ ವೃದ್ಧ್ಯಾದಿಗಳಿಗೆ ಭೋಗಮಾತ್ರವು ಕಾರಣವಲ್ಲ.

ದಾಸಸಾಹಿತ್ಯ :-

ಶ್ರೀ ವಿಜಯದಾಸರ ಮುಕ್ತರ ಸುಳಾದಿ.

## 11. ಅನಾವೃತ್ತ್ಯಧಿಕರಣ

ಸೂತ್ರ :-

1. ಓಂ ಅನಾವೃತ್ತಿಶ್ಶಬ್ದಾದನಾವೃತ್ತಿಶಬ್ದಾತ್ ಓಂ || ೨೩ ||

"ನಚ ಪುನರಾವರ್ತತೇ" ಎಂಬ ಶ್ರುತಿಯಂತೆ ಮುಕ್ತರಿಗೆ ಪುನರ್ಜನ್ಮವಿಲ್ಲ. ಮುಕ್ತರು ಸರ್ವಕಾಲದಲ್ಲೂ ಸ್ವರ್ಗಿಗಳಂತೆ ಆನಂದದಾದಿರುತ್ತಾರೆ, ಪುನರಾವೃತ್ತಿ ಇಲ್ಲದವರಾಗಿ ನಿತ್ಯ ನಿರ್ದುಃಖ ಆನಂದಾನುಭವವುಳ್ಳವರೇ ಆಗಿರುತ್ತಾರೆ.

ದಾಸಸಾಹಿತ್ಯ :-

ಅವರ ವಾರ್ತೆ ಕೇಳಿದವರು ಒಲ್ಲರು ಸಂಸಾರವನ್ನು
ಅವನ ಮೂರ್ತಿ ನೋಡಿದವರು ಮನೆಯ ಧನವ ಬಿಡುವರು
ಅವನ ಪುರಕೆ ಪೋದ ಜನರು ಒಮ್ಮೆಗಾನಾ ಹಿಂತಿರುಗರು
ಅವನು ತಾನೇ ತನಯರನ್ನು ತನ್ನ ಅವಯವದಿಂದ ಪಡೆದವಗೆ
ಒಲಿದೆ ಏಕಮ್ಮ ಲಕುಮಿ ವಾಸುದೇವಗೆ ||

(ಶ್ರೀ ಗುರುಗೋಪಾಲವಿಠಲರು)

ಸಮರ್ಪಣೆ

ಜ್ಞಾನಾನಂದಾದಿಭಿಃ ಸರ್ವೈರ್ಗುಣೈಃ ಪೂರ್ಣಾಯವಿಷ್ಣುವೇ |
ನಮೋಸ್ತು ಗುರುವೇ ನಿತ್ಯಂ ಸರ್ವಾರ್ಥ್ಯಾತಿಪ್ರಿಯಾಯವೋ || ೧ ||

ಜ್ಞಾನ ಆನಂದ ಮೊದಲಾದ ಸರ್ವ ಸದ್ಗುಣಗಳಿಂದ ಪೂರ್ಣನೂ ಗುರುವೂ ಆದ, ನಿತ್ಯದಲ್ಲಿ ಸರ್ವರಿಂದಲೂ, ಸರ್ವಪ್ರಕಾರದಿಂದಲೂ ನಿರುಪಾಧಿಕ ಪ್ರಿಯನೂ ಆದ ವಿಷ್ಣುಗೋಸ್ಕರ ಎಂದು ಶ್ರೀಮದಾಚಾರ್ಯರು ನಿವೇದಿಸಿ ಕೊಂಡಿರುತ್ತಾರೆ.

**ಯಸ್ಯ ತ್ರೀಣ್ಯುದಿತಾನಿ ವೇದ ವಚನೇ ರೂಪಾಣಿ ದಿವ್ಯಾನ್ಯಲಂ ಬಟ್ ತದ್ದರ್ಶತ ಮಿತ್ಥಮೇವ ನಿಹಿತಂ ದೇವಸ್ಯ ಭರ್ಗೋ ಮಹತ್ । ವಾಯೋ. ರಾಮಚೋನಯಂ ಪ್ರಥಮಕಂ ಪೃಕ್ಷೋ ದ್ವಿತೀಯಂ ವಪುರ್ಮಧ್ವೋಯತ್ತು ತೃತೀಯಕಂ ಕೃತಮಿದಂ ಭಾಷ್ಯಂ ಹತಾತೇನ ಹಿ ॥ (ತೃತೀಯಮೇಕದ ಮುನಾ ಭಾಷ್ಯಂ ಕೃತಂ ಕೇಶವೇ)**

ಬಳಿತ್ಥಾ ಸೂಕ್ತ ಪ್ರತಿಪಾದ್ಯರಾದ, ವಾಯುದೇವರ ಮೂಲರೂಪ ಬಲಾತ್ಮಕವೂ, ಜ್ಞಾನಾತ್ಮಕವೂ, ವ್ಯಾಪ್ತಿ ಉಳ್ಳದ್ದೂ ಆಗಿದೆ. ಪೂಜ್ಯವಾದುದು, ಸರ್ವ ಶ್ರೇಷ್ಠವಾದುದಾಗಿದೆ. ಅವರ ಮೂಲರೂಪಕ್ಕೂ ಅವತಾರ ರೂಪಕ್ಕೂ ಏನೇನೂ ವ್ಯತ್ಯಾಸವೇ ಇಲ್ಲಿ. ಒಂದನೆಯದು ಹನುಮರೂಪ ಅಪಾರವಾಗಿ, ನಿರ್ವ್ಯಾಜವಾಗಿ ಶ್ರೀರಾಮದೇವರ ಸೇವೆಮಾಡಿ ಎರಡನೆ ಅವತಾರದಲ್ಲಿ ಶ್ರೀಕೃಷ್ಣನನ್ನು ಭೀಮಸೇನರಾಗಿ ಸೇವಿಸಿ ಈ ಮೂರನೆ ಅವತಾರದಲ್ಲಿ ಶ್ರೀಮಧ್ವರಾಗಿ ಅವತರಿಸಿ ಆನಂದರೂಪಿಯಾದ ಶ್ರೀಹರಿಯನ್ನು ಪ್ರತಿಪಾದಿಸುವ ಶಾಸ್ತ್ರವನ್ನುಮಾಡಿ ವಿರಾಜಿಸಿರುತ್ತಾರೆ ಅಂತಹ ಶ್ರೀವಾಯುದೇವರಿಂದ ಶ್ರೀಮದ್ಬ್ರಹ್ಮಸೂತ್ರಭಾಷ್ಯವು ರಚಿಸಲ್ಪಟ್ಟಿರುವುದರಿಂದ ಸಕಲ ಸಜ್ಜನರೂ ಅತ್ಯಾದರದಿಂದ ಇದನ್ನು ಅಂಗೀಕರಿಸಬೇಕು.

## ಮಂಗಳ

**ನಿತ್ಯಾನಂದೋ ಹರಿಃ ಪೂರ್ಣೋನಿತ್ಯದಾಪ್ರೀಯತಾಂ ಮಮ ।**

**ನಮಸ್ತಸ್ಮೈ ನಮಸ್ತಸ್ಮೈ ನಮಸ್ತಸ್ಮೈಚ ವಿಷ್ಣುವೇ ॥**

ಸರ್ವದಾ ಆನಂದಪೂರ್ಣನು, ಆನಂದರೂಪನು, ದೇಶಕಾಲ ಗುಣದಿಂದ ಅಪರಿಚಿನ್ನನ್ನೂ ಆದ ಶ್ರೀಹರಿಯು ಸರ್ವದಾ ನನಗೆ ಪ್ರೀತನಾಗಲಿ, ಅಂತಹ ಶ್ರೀವಿಷ್ಣುವಿಗೋಸ್ಕರ ನಮಸ್ಕಾರವು.

ಹೀಗೆ ಶ್ರೀಮದಾಚಾರ್ಯರು ತಮ್ಮಿಂದರಚಿತವಾದ 564ಬ್ರಹ್ಮಸೂತ್ರಗಳಿಗೂ ಶ್ರೀವಿಷ್ಣುವಿನ ಪರವಾಗಿ ಅರ್ಥಮಾಡಿ ಅರ್ಪಿಸಿ ಪುನೀತರಾಗಿರುತ್ತಾರೆ.

ಇತಿ ಶ್ರೀಮತ್ಕೃಷ್ಣದ್ವೈಪಾಯನ ಕೃತ ಬ್ರಹ್ಮಸೂತ್ರಭಾಷ್ಯೇ
ಶ್ರೀಮದಾನಂದ ತೀರ್ಥ ಭಗವತ್ಪಾದಾಚಾರ್ಯ ವಿರಚಿತ
ಗ್ರಂಥೇ ಸಮಾಪ್ತಃ

ಶ್ರೀಕೃಷ್ಣಾರ್ಪಣಮಸ್ತು
ಶ್ರೀ ಹರಿದಾಸರ ಪಾದ ರಜನಾದ
ಚಿಂಚೋಳಿ ಪ್ರಹ್ಲಾದಾಚಾರ್ಯ
ನಂ. 784 "ಮಧ್ವನಿಲಯ" 13ನೇ ಮೈನ್
3ನೇಬ್ಲಾಕ್, ರಾಜಾಜಿನಗರ, ಬೆಂಗಳೂರು–10.

–o–o–o–

–ಶ್ರೀಮದ್ಬ್ರಹ್ಮಸೂತ್ರಭಾಷ್ಯಂ ಸಂಪೂರ್ಣಂ–

## ಶ್ರೀ ಬ್ರಹ್ಮಸೂತ್ರಭಾಷ್ಯೋಕ್ತ ಪ್ರಮಾಣಗಳ ಅಕ್ಷರಾನುಕ್ರಮಣಿಕಾ

1. ಆಧ್ಯಾತ್ಮ
2. ಆಗ್ನೇಯ
3. ಆಗ್ನಿವೈಶ್ಯ
4. ಆದಿತ್ಯಪುರಾಣ
5. ಇಂದ್ರದ್ಯುಮ್ನ ಶಾಖಾ
6. ಉದ್ದ್ಯಾಲಕ ಶ್ರುತಿ
7. ಕಮದ ಶ್ರುತಿ
8. ಕಾಣ್ವ ಶಾಖಾ
9. ಕಾಷಾಯಣ ಶ್ರುತಿ
10. ಕೌಂಡಿನ್ಯ ಶ್ರುತಿ
11. ಕೌಂಟರವ್ಯ ಶ್ರುತಿ
12. ಕೌಶಿಕ ಶ್ರುತಿ
13. ಗಾರುಡ
14. ಗೌಪವನ
15. ಚತುರ್ವೇದ ಶಿಖಾ
16. ಜಾಬಾಲ ಶ್ರುತಿ
17. ತಲವಕಾರ
18. ತುರ ಶ್ರುತಿ
19. ನಾಮಮಹೋದಧಿ
20. ನಾರದೀಯ
21. ನಾರಾಯಣ ಸಂಹಿತಾ
22. ಪರಮ ಸಂರಿತಾ
23. ಪಾದ್ಮ
24. ಪರಾಶರ್ಯಾಯಣಶ್ರುತಿ
25. ಪಿಪ್ಪಲಾವ ಶಾಖಾ
26. ಪುರುಷೋತ್ತಮ ತಂತ್ರ
27. ಪೈಂಗಿ ಶ್ರುತಿ
28. ಪೌತ್ರಾಯಣ ಶ್ರುತಿ
29. ಪೌಷ್ಯಾಯಣ ಶ್ರುತಿ
30. ಬ್ರಹ್ಮತರ್ಕ
31. ಬ್ರಹ್ಮ ವೈವರ್ತ
32. ಬ್ರಹ್ಮಾಂಡ
33. ಬ್ರಾಹ್ಮ
34. ಬೃಹತಂತ್ರ
35. ಬೃಹತ್ಸಂಹಿತಾ
36. ಭವಿಷ್ಯತ್ಪರ್ವ
37. ಭವಿಷ್ಯತ್ಪುರಾಣ
38. ಭಾಗವತ
39. ಭಾಗವತ ತಂತ್ರ
40. ಭಾರತ
41. ಭಗವದ್ಗೀತಾ
42. ಭಲ್ಲವೇಯ ಶ್ರುತಿ
43. ಮಹಾಕೌರ್ಮ
44. ಮಹಾಸಂಹಿತಾ
45. ಮಹೋಪನಿಷತ್
46. ಮಾಂಡವ್ಯ ಶ್ರುತಿ
47. ಮಾಠರ ಶ್ರುತಿ
48. ಮಾತ್ಸ್ಯ
49. ಮಾಧ್ಯಂದಿನಾಯನಶ್ರುತಿ
50. ಮಾಯಾವೈಭವ
51. ಮೌದ್ಗಲ್ಯ ಶ್ರುತಿ
52. ವತ್ಸಲ ಶ್ರುತಿ
53. ವಾಮನ
54. ವಾಯುಪ್ರೋಕ್ತ
55. ವಾರಾಹ
56. ವಾರಾಹ ಸಂಹಿತಾ
57. ವ್ಯೋಮ ಸಂಹಿತಾ
58. ವ್ಯಾಸಸ್ಮೃತಿ
59. ಶಾಂಡಿಲ್ಯಶ್ರುತಿ
60. ಶ್ವೇತಾಶ್ವತರ ಶ್ರುತಿ
61. ಸ್ಕಾಂದಪುರಾಣ
62. ಸಾತ್ರಾಯಣ ಶ್ರುತಿ
63. ಸೌಪರ್ಣ ಶ್ರುತಿ
64. ಹರಿವಂಶ

# ಶ್ರೀಮದಾಚಾರ್ಯರ ಸರ್ವಮೂಲ ಗ್ರಂಥಗಳ ವಿವರ (ಸಂಖ್ಯೆ 37)

| ಪ್ರಸ್ಥಾನ ತ್ರಯ ಗ್ರಂಥಗಳು | | ಪ್ರಕರಣ ಗ್ರಂಥಗಳು | ತಂತ್ರ, ಕಲ್ಪ ಸ್ತೋತ್ರಗ್ರಂಥಗಳು |
|---|---|---|---|
| ವೇದಪ್ರಸ್ಥಾನ | ಸೂತ್ರಪ್ರಸ್ಥಾನ | 1. ಪ್ರಮಾಣಲಕ್ಷಣ | 1. ತಂತ್ರಸಾರ ಸಂಗ್ರಹ |
| 1 ಋಗ್ಭಾಷ್ಯ | 1. ಬ್ರಹ್ಮಸೂತ್ರಭಾಷ್ಯ | 2. ಮಾಯಾವಾದಖಂಡನಾ | 2. ಜಯಂತಿ ನಿರ್ಣಯ |
| | 2. ಅನುವ್ಯಾಖ್ಯಾನ | 3. ಕಥಾಲಕ್ಷಣ | 3. ಕೃಷ್ಣಾಮೃತ ಮಹಾರ್ಣವ |
| ದಶೋಪನಿಷತ್ | 3. ಅಣುಭಾಷ್ಯ | 4. ಉಪಾಧಿ ಖಂಡನಾ | 4. ಯತಿಪ್ರಣವ ಕಲ್ಪ |
| 1. ಈಶಾವಾಸ್ಯೋಪನಿಷತ್ | 4. ನ್ಯಾಯವಿವರಣ | 5. ಮಿಥ್ಯಾತ್ವಾನುಮಾನಖಂಡನಾ | 5. ನಖಸ್ತೋತ್ರ |
| 2. ತಲವಕಾರೋಪನಿಷತ್ | ಒಟ್ಟು 4 ಗ್ರಂಥಗಳು | 6. ತತ್ತ್ವ ವಿವೇಕ | 6. ದ್ವಾದಶಸ್ತೋತ್ರ |
| 3. ಅಥರ್ವಣೋಪನಿಷತ್ | | 7. ತತ್ತ್ವ ಸಂಖ್ಯಾನ | 7. ಸದಾಚಾರಸ್ಮೃತಿ |
| 4. ಮಾಂಡೂಕ್ಯೋಪನಿಷತ್ | ಪುರಾಣಪ್ರಸ್ಥಾನ | 8. ತತ್ತ್ವೋದ್ಯೋತ | 8. ಶ್ರೀಕೃಷ್ಣಗದ್ಯ |
| 5 ಷಟ್‌ಪ್ರಶ್ನೋಪನಿಷತ್ | 1. ಮಹಾಭಾರತ ತಾತ್ಪರ್ಯನಿರ್ಣಯ | 9. ವಿಷ್ಣುತತ್ತ್ವನಿರ್ಣಯ | |
| 6. ಕಾಠಕೋಪನಿಷತ್ | 2. ಗೀತಾತಾತ್ಪರ್ಯ | 10. ಕರ್ಮನಿರ್ಣಯ | |
| 7. ತೈತ್ತರೀಯೋಪನಿಷತ್ | 3. ಗೀತಾಭಾಷ್ಯ | | |
| 8. ಛಾಂದೋಗ್ಯೋಪನಿಷತ್ | 4. ಯಮಕ ಭಾರತ | | |
| 9. ಬೃಹದಾರಣ್ಯಕೋಪನಿಷತ್ | | | |
| 10. ಐತರೇಯೋಪನಿಷತ್ | | | |
| ಒಟ್ಟು 11 ಗ್ರಂಥಗಳು | ಒಟ್ಟು 4 ಗ್ರಂಥಗಳು | ಒಟ್ಟು 10 ಗ್ರಂಥಗಳು | ಒಟ್ಟು 8 ಗ್ರಂಥಗಳು |

ಹೀಗೆ ಸಾಕ್ಷಾತ್ ವಾಯುದೇವರ ಮೂರನೆಯ ಅವತಾರವಾದ ಶ್ರೀಮದಾನಂದ ತೀರ್ಥಭಗವದ್‌ಪಾದಾಚಾರ್ಯರಿಂದ ವೇದ ಸಮ್ಮತವಾದ ಹಾಗೂ ಸಾಕ್ಷಾತ್ ಶ್ರೀಮನ್‌ನಾರಾಯಣನೇ ಆದ ಜ್ಞಾನದಾಯಕರಾದ ಶ್ರೀ ವೇದವ್ಯಾಸದೇವರಿಗೆ ಅತ್ಯಂತ ಸಮ್ಮತವಾದ ಮೋಕ್ಷಶಾಸ್ತ್ರವೆನಿಸಿದ ಈ "(ತ್ರಿ) ಸರ್ವಮೂಲ" ಗ್ರಂಥಗಳ ಸಂಖ್ಯೆ ಒಟ್ಟು 37 ಎಂದು ಶ್ರೀ ವ್ಯಾಸತ್ರಯ ಕರ್ತರಾದ ಶ್ರೀವ್ಯಾಸರಾಜ ಗುರುಸಾರ್ವಭೌಮರು "ಗ್ರಂಥರತ್ನ ಮಾಲಿಕಾ" ಎಂಬ ಗ್ರಂಥದಲ್ಲಿ ಸ್ಪಷ್ಟಪಡಿಸಿರುವುದಲ್ಲದ ತಮದೊಂದು ಕನ್ನಡ ಕೃತಿಯಲ್ಲಿಯೂ ಸಹ "ಆರಾರು ಮೇಲೊಂದು ಅಧಿಕ ಲೆಕ್ಕದ ಗ್ರಂಥ" ಎಂದು ತಿಳಿಯಪಡಿಸಿರುತ್ತಾರೆ ಇದನ್ನೇ ಶ್ರೀ ಶ್ರೀ ಗೋಪಾಲದಾಸರು ತಮ್ಮ ಕೃತಿ ಒಂದರಲ್ಲಿ ದಶಉಪನಿಷತುಗಳಿಗೆ ಟೀಕವನ್ನು ಮಾಡಿ। ಪೋಸಗೀತಭಾಷ್ಯ ಋಗ್ಭಾಷ್ಯಾಣುವೇದಾಂತ। ಅಸಮ ತಾತ್ಪರ್ಯನಿರ್ಣಯ ದ್ವಾದಶಸ್ತೋತ್ರ। ಕುಶಲದಿ ಯಮಕ ಭಾರತ ಗ್ರಂಥಗಳ ಮಾಡಿ। ಕುಸುಮನಾಭತೀರ್ಥ ನರಹರಿ ತೀರ್ಥರು। ಎಸೆವ ಮಾಧವ ತೀರ್ಥ ಅಕ್ಷೋಭ್ಯ ತೀರ್ಥ। ಗು ಸುರಿ ಸರ್ವಾರ್ಥ ಸಾರವ ತೋರಿ ಗ್ರಂಥವ। ವಸುಧೆಯ ಮೇಲಿರಿಸಿ। ರಂಜಿಸುತಲಿ। ಬದರಿಗೆ ನೀಪೋಗಲೆನ್ನಳವೆ ನಿನ್ನ ಗುರುಗಳಿರನ್ನ ॥ ಎಂದಿರುತ್ತಾರೆ.

ದಾಸಶ್ರೇಷ್ಠರೆನಿಸಿದ ಶ್ರೀ ಪುರಂದರದಾಸರೂ ಸಹ "ಮೂವತ್ತೇಳು ಗ್ರಂಥಗಳ ರಚಿಸಿದ ನಮ್ಮ ಅಲವಭೋಧರ ಭಜಿಸಿರಯ್ಯಾ ಶ್ರೀ ತತ್ವವಾದ ಮತವ" ಎಂದಿರುತ್ತಾರೆ.

## ಮೂವತ್ತೇಳೇ ಏಕೆ ?

ಕನ್ನಡಭಾಷೆಯ ವರ್ಣಮಾಲೆಯಲ್ಲಿ ಈ 37 ಎಂಬ ಸಂಖ್ಯೆಯ ಸ್ಥಾನ ಮಾನ "ದಾ" ಹಾಗೂ "ಸಾ" ಎಂದಾಗುವುದರಿಂದ ಶ್ರೀಮದಾಚಾರ್ಯರ ಸರ್ವಮೂಲ ಗ್ರಂಥಗಳ ಮುಖ್ಯ ತಾತ್ಪರ್ಯ ಜೀವನಾದವನು ಪರಮಾತ್ಮನಿಗೆ ದಾಸನಾಗಿರುತ್ತಿದ್ದಾನೆ ಎಂದು ತಿಳಿಸುವುದೇ ಆಗಿದೆ. ಜೀವನು ಪರಮಾತ್ಮನಿಗೆ ಎಲ್ಲಿಯವರೆಗೆ ದಾಸನಾಗಿರಬೇಕು ಎಂದು ಕುತೂಹಲತೆಯಿಂದ ಪ್ರಶ್ನಿಸಿದರೆ ಆ 'ದಾಸ' ಎಂಬ ಪದವನ್ನು ಹಿಂದು ಮುಂದು ಮಾಡಿದಾಗ ಅಂದರೆ 'ಸತಾ' ಎಂದು ಸ್ಥಿರ ಪಡುತ್ತಿದೆ. ಮೋಕ್ಷದಲ್ಲೂ ಜೀವನು ಪರಮಾತ್ಮನಿಗೆ ದಾಸನಾಗಿಯೇ ಉಳಿಯುತ್ತಾನೆಂಬುದೇ ಮುಖ್ಯ ತಾತ್ಪರ್ಯ.

## ಸರ್ವಮೂಲಗ್ರಂಥಗಳ ಸೂಕ್ಷ್ಮ ಪರಿಚಯ :-

ಸಾಮಾನ್ಯವಾಗಿ ಆಸ್ತಿಕ ಸಮೂಹಕ್ಕೆ ಶ್ರೀಮದಾಚಾರ್ಯರು ಸರ್ವಮೂಲ ಗ್ರಂಥವನ್ನು ರಚಿಸಿ ಅನುಗ್ರಹಿಸಿದ್ದಾರೆಂಬ ವಿಚಾರ ಗೊತ್ತಿದೆಯೇ ಹೊರತು ಆಗ್ರಂಥಗಳ ಹೆಸರಾಗಲಿ ಹಾಗೂ ಅದರಲ್ಲಿ ಅಡಕವಾಗಿರುವ ವಿಚಾರ ಲಹರಿಯಾಗಲಿ ಪರಿಚಯವಾಗಿರುವುದಿಲ್ಲ. ಇದು ಸಾಮಾನ್ಯರಿಗೆ ನಿಲುಕದು ಪಂಡಿತರು ಹೇಳರು, ಒಂದು ವೇಳೆ ಹೇಳಿದರೂ ಅತ್ಯಂತ ಸ್ಥೂಲ ಪರಿಚಯ ಮಾಡಿಕೊಡುವುದು ಸರ್ವಮೂಲ ಗ್ರಂಥದ ಪಾಪಿತ್ರತೆಗೆ ಧಕ್ಕೆ ಬಂದಂತೆ ಎಂಬುದೂಸಹ ಕೆಲವು ಪಂಡಿತಮಾನಿಗಳವಾದ, ಹೀಗಾಗಿ ಭಾಷಾ ಪರಿಚಯ ವಿಹೀನರಾದ ಆಸ್ತಿಕರಿಗೆ ಸರ್ವಮೂಲಗಳ ಸ್ಥೂಲ ಪರಿಚಯ ಮಾಡಿಕೊಡುವುದು ಅತ್ಯಾವಶ್ಯಕವೆಂದೂ, ಆದರಿಂದ ಅಧಿಕಾರಿಗಳಿಗೆ ಆಗ್ರಂಥಗಳ ಅವಲೋಕನ ಆಕಾಂಕ್ಷೆ ಹುಟ್ಟುವುದು ಸಹಜವೆಂದು ಬಗೆದು. ಒಂದೊಂದು ಗ್ರಂಥಗಳ ಬಗ್ಗೆಯೂ ಒಂದೆರಡು ವಾಕ್ಯಗಳಲ್ಲಿ ಸಮನ್ವಯಾ ದೃಷ್ಟಿಯಿಂದ ಬರೆಯುತ್ತಿದ್ದೇನೆ. ನಾನು ಮೊದಲೆ ಮುನ್ನುಡಿಯಲ್ಲಿ ಬಿನ್ನೈಸಿ ಕೊಂಡಿರುವಂತೆ ಈ ನನ್ನ ಗ್ರಂಥ ಪಂಡಿತರಿಗಲ್ಲ. ಇದು ಕೇವಲ ಪಾಪನರಾದ ಆಸ್ತಿಕ ಸಮುದಾಯಕ್ಕೆಮಾತ್ರ.

## ವೇದಪ್ರಸ್ಥಾನ

### 1. ಋಗ್ಭಾಷ್ಯ :-

ಶ್ರೀಮದಾಚಾರ್ಯರು ಈ ಗ್ರಂಥದಲ್ಲಿ ಸಕಲ ವರ್ಣಗಳೂ, ಪದಗಳೂ, ಹಾಗೂ ವಾಕ್ಯಾದಿಗಳೆಲ್ಲಾ ಶ್ರೀಹರಿಯ ಸರ್ವೋತ್ತಮತ್ವ ಪ್ರತಿಪಾದಕವಾದುದೆಂಬುದನ್ನು ಏನಾದರೂ ವೇದ ವಾಕ್ಯಗಳಲ್ಲಿ ಪರಸ್ಪರ ವಿರೋಧ ಸೂಚಕಾಭಿಪ್ರಾಯ ಆಪಾತತಃ ಕಂಡುಬರುವಂತಿದ್ದರೆ ಅವುಗಳಿಗೆ ಸರಿಯಾಗಿ ಪರಮಾತ್ಮನಲ್ಲಿ ಸಮನ್ವಯ ಮಾಡುವ ಕ್ರಮವನ್ನು ತಿಳಿಯಪಡಿಸಿರುತ್ತಾರೆ.

## 2. ಈಶಾವಾಸ್ಯ ಉಪನಿಷತ್ ಭಾಷ್ಯ

ಈ ಗ್ರಂಥದಲ್ಲಿ ಶ್ರೀಮದಾಚಾರ್ಯರು ವಿಶ್ವವೆಲ್ಲಾ ಭಗವಂತನ ವ್ಯಾಪ್ತತೆಗೆ ಒಳಪಟ್ಟಿದೆ ಎಂದೂ, ಜೀವರುಗಳಲ್ಲಿ ಪರಸ್ಪರ ಭೇಧವಿರುವುದರಿಂದ ಫಲದಲ್ಲಿಯೂ ತಾರತಮ್ಯವುಂಟೆಂದೂ, ಆತ್ಮೋದ್ಧಾರಕ್ಕೆ ವೈರಾಗ್ಯವು ಅತ್ಯಾವಶ್ಯಕವಾದುದೆಂದೂ ಜ್ಞಾನಸಂಪಾದನೆಗೆ ಕರ್ಮವೇ ತಳಹದಿ ಎಂದೂ, ಮೋಕ್ಷಸಿದ್ಧಿಗೆ ಸತ್ಕರ್ಮಾಚರಣೆ ಅತ್ಯಾವಶ್ಯಕವೆಂದೂ, ಜ್ಞಾನಿಗೂ ಈ ಕರ್ಮ ಬಿಟ್ಟಿದ್ದಿಲ್ಲವೆಂದೂ ತಿಳಿಸುತ್ತಾ ಮಿಥ್ಯಾಜ್ಞಾನವು ಹಾನಿಕರ ಎಂದು ಎಚ್ಚರಿಸಿದ್ದಾರೆ.

## 3. ತಲವಕಾರ ಉಪನಿಷದ್ ಭಾಷ್ಯ

ಈ ಗ್ರಂಥದಲ್ಲಿ ಶ್ರೀಮದಾಚಾರ್ಯರು ಪರಮಾತ್ಮನು ಅನಂತ ಗುಣ ಪರಿ-ಪೂರ್ಣನೆಂದೂ, ಸಾಕಲ್ಯೇನ ಯಾವ ದೇವತೆಗಳಿಂದಲೂ ತಿಳಿಯಲಾರದವನೆಂದೂ. ಕೇವಲ ಅವನ ಅನುಗ್ರಹ ಬಲದಿಂದ ಜೀವಿಗಳು ಪುನೀತರಾಗಬೇಕೇ ವಿನಹ ಅವನನ್ನು ವಲಿಸಿಕೊಳ್ಳುವ ಸಾಮರ್ಥ್ಯ ಯಾರಿಗೂ ಇಲ್ಲವೆಂದೂ, ಜೀವನಾದವನು ಯಾವಕಾಲ ದಲ್ಲೂ ಪರಮಾತ್ಮ ಆಗುವುದಿಲ್ಲ ಅದು ಸಾಧ್ಯವೇ ಇಲ್ಲ ಎಂದು ಎಚ್ಚರಿಸುತ್ತಾ ಮಿಥ್ಯಾ ಜ್ಞಾನವನ್ನು ಅಪಾಯಕಾರಿಯೆಂದು ತಿಳಿಸಿರುತ್ತಾರೆ.

## 4. ಅಥರ್ವಣೋಪನಿಷದ್ ಭಾಷ್ಯ

ಈ ಗ್ರಂಥದಲ್ಲಿ ಶ್ರೀಮದಾಚಾರ್ಯರು ಪರಮಾತ್ಮನ ನೈಜ ತತ್ವಜ್ಞಾನದಿಂದ ಮೋಕ್ಷ ಪ್ರಾಪ್ತಿ ಎಂದೂ, ಬ್ರಹ್ಮನನ್ನು ತಿಳಿದವನು ಎಂದಿಗೂ ಬ್ರಹ್ಮನಾಗಲಾರನೆಂದೂ ಜೀವ ಪರಮಾತ್ಮರಿಗೆ ಸದಾ ಎಲ್ಲೆಡೆ ಭೇದವುಂಟೆಂದೂ ಸ್ಪಷ್ಟಪಡಿಸಿರುತ್ತಾರೆ.

## 5. ಮಾಂಡೋಕ್ಯೋಪನಿಷದ್ ಭಾಷ್ಯ

ಈ ಗ್ರಂಥದಲ್ಲಿ ಶ್ರೀಮದಾಚಾರ್ಯರು "ಓಂ" ಕಾರಕ್ಕೆ ನಾಲ್ಕು ಅವಯವ-ಗಳುಂಟೆಂದೂ, ಅವಕ್ಕೆ ವಿಶ್ವ, ತೈಜಸ, ಪ್ರಾಜ್ಞ ಮತ್ತು ತುರ್ಯ ಎಂಬುವ ಭಗವದ್ ಲೋಪಗಳಿವೆ ಎಂದೂ, ಅವು ಜೀವಿಗಳ ಜಾಗ್ರತೆ, ಸ್ವಪ್ನ, ಸುಷುಪ್ತಿ, ಮೋಕ್ಷಾದಿ-ಗಳನ್ನು ನಿಯಂತ್ರಿಸುವುವೆಂದೂ ಮಿಥ್ಯಾಜ್ಞಾನ ವರ್ಜಿತರಾಗಿ ಶ್ರೀಹರಿಯ ಅನುಗ್ರಹ ದಿಂದ ಮೋಕ್ಷ ಪಡೆಯಬೇಕೆಂದೂ ತಿಳಿಸಿರುವರು.

## 6. ಷಟ್‌ಪ್ರಶ್ನ ಉಪನಿಷತ್ ಭಾಷ್ಯ

ಈಗ್ರಂಥದಲ್ಲಿ ಶ್ರೀಮದಾಚಾರ್ಯರು ಶ್ರೀಹರಿ ವಾಯುಗಳ ಮಹಿಮೆಯನ್ನು ಬಹುವಾಗಿ ವರ್ಣಿಸಿರುತ್ತಾರೆ. ಪರಮಾತ್ಮನು ಪ್ರಜಾಸೃಷ್ಟಿಗೆ ಮನಸ್ಸುಮಾಡಿ

ವಾಯುದೇವರಿಗೆ ಮುಂದಿನ ಕಾರ್ಯವನ್ನು ವಹ್ಪಿಸಿದ ಬಗೆಯನ್ನು ತಿಳಿಸುತ್ತಾ ಶ್ರೀ-ಹರಿವಾಯುಗಳ ಅನುಗ್ರಹದಿಂದಲೇ ಮೋಕ್ಷಪ್ರಾಪ್ತಿ ಎಂದು ಸ್ಪಷ್ಟಪಡಿಸಿರುತ್ತಾರೆ.

## 7. ಕಾಠಕೋಪನಿಷತ್ ಭಾಷ್ಯ

ಈಗ್ರಂಥದಲ್ಲಿ ಶ್ರೀಮದಾಚಾರ್ಯರು ಶ್ರೇಯ ಮತ್ತು ಪ್ರೇಯದಲ್ಲಿ ವಿವೇಕಿಯಾದವನು ಶ್ರೇಯಸ್ಸಿನಹಾದಿ ಹಿಡಿಯುವನೆಂದೂ, ನಚಿಕೇತನ ತತ್ವಜ್ಞಾನಾಖ್ಯಾನಾದಿಗಳನ್ನೂ ನಿರೂಪಿಸಿರುವರು.

## 8. ಛಾಂದೋಗ್ಯೋಪನಿಷದ್ ಭಾಷ್ಯ

ಈಗ್ರಂಥದಲ್ಲಿ ಶ್ರೀಮದಾಚಾರ್ಯರು ಸಕಲ ವೇದಕ್ಕೂ ಪುರುಷಸೂಕ್ತವೇ ಮೂಲವೆಂದೂ ಅದಕ್ಕೆ ಗಾಯತ್ರಿ ವ್ಯಾಹುತಿ ಎಂದೂ, ಅದಕ್ಕೆ "ಓಂ"ಕಾರವೇ ಮೂಲವೆಂದೂ, ಇವುಗಳ ಮುಖ್ಯಾರ್ಥ ಪರಮಾತ್ಮನೇ ಎಂದೂ ಹಾಗೂ ಧಹರ ವಿಧ್ಯಾವರ್ಣನೆಯನ್ನು ನಿರೂಪಿಸಿರುತ್ತಾರೆ.

## 9. ಐತರೇಯ ಉಪನಿಷದ್ ಭಾಷ್ಯ

ಇದು ಶ್ರೀಮದಾಚಾರ್ಯರಿಗೆ ಅತ್ಯಂತ ಪ್ರಿಯತಮವಾದದ್ದು ಇದರಲ್ಲಿ ಶ್ರೀ-ಮದಾಚಾರ್ಯರು ವೇದಗಳ ಸಕಲ ಶಬ್ದಗಳನ್ನೂ ಪರಮಾತ್ಮನಲ್ಲಿ ಸಮನ್ವಯ ಮಾಡಿ ಅದೇ ಸರಿಯಾದುದೆಂದರು. ಇದನ್ನು ಅನುವಾದ ಮಾಡುತ್ತಾ ಮಾಘಶುದ್ಧ ನವಮಿ ಉಡುಪಿಯ ಅನಂತೇಶ್ವರ ದೇವಾಲಯದಿಂದ ಶ್ರೀಬದರಿಕಾಶ್ರಮಕ್ಕೆ ಪ್ರಯಾಣ ಮಾಡಿದರು. ಅದೇ ಮಧ್ವನವಮಿ.

## 10. ತೈತರೀಯ ಉಪನಿಷದ್ ಭಾಷ್ಯ

ಈಗ್ರಂಥದಲ್ಲಿ ಶ್ರೀಮದಾಚಾರ್ಯರು ಶ್ರೀಹರಿಯೇ ಸರ್ವೋತ್ತಮನೆಂದೂ, ಮೋಕ್ಷದಲ್ಲಿಯೂ ತಾರತಮ್ಯ ಉಂಟೆಂಬುದನ್ನು ತಿಳಿಸಿದರು.

## 11. ಭೃಹದಾರಣ್ಯಕೋಪನಿಷದ್ ಭಾಷ್ಯ

ಈಗ್ರಂಥದಲ್ಲಿ ಶ್ರೀಮದಾಚಾರ್ಯರು ಜೀವನಿಗೆ ಅವನ ಸಾಧನಾಪೂರ್ಣತೆಗೆ ಮೋಕ್ಷ ಎನ್ನುವರೆಂಬುದನ್ನು ತಿಳಿಸಿದರು. ಮೋಕ್ಷಪ್ರದಾತ ಸಾಕ್ಷಾತ್ ಪರಮಾತ್ಮನೇ ಎಂದೂ ಇದು ಅನೇಕಜನ್ಮಗಳ ಸಾಧನೆಯಿಂದ ಲಭಿಸುವುದೆಂಬುದನ್ನು ತಿಳಿಸಿದರು.

## ಪುರಾಣ ಪ್ರಸ್ಥಾನಗಳು

## 12. ಶ್ರೀಮದ್ ಭಾಗವತ ತಾತ್ಪರ್ಯ

ಶ್ರೀಮದಾಚಾರ್ಯರು ಈಗ್ರಂಥದಲ್ಲಿ ಶ್ರೀಮದ್‌ಭಾಗವತದಿಂದ ಭಕ್ತಿ ಉಂಟಾ

ಗುತ್ತಿದೆ ಎಂದೂ, ಅದೇ ಮೋಕ್ಷಕ್ಕೆ ಮೂಲವೆಂದೂ "ದ್ರವ್ಯಂ ಕರ್ಮಚಕಾಲಶ್ಚ ಸ್ವಭಾವೋ ಜೀವಏವಚ । ಯದನುಗ್ರಹತಃ ಸತಿ ನ ಸಂತಿಯದುಪೇಕ್ಷಯಾ" ಎಂದು ತಿಳಿಸುತ್ತಾ ದ್ವೈತ ಜ್ಞಾನದಿಂದಲೇ ಮೋಕ್ಷ ಎಂದು ಸ್ಪಷ್ಟಪಡಿಸಿದರು.

## 13. ಶ್ರೀಮನ್ ಮಹಾಭಾರತ ತಾತ್ಪರ್ಯ ನಿರ್ಣಯ

ಇದು ಶ್ರೀಮದಾಚಾರ್ಯರ ಗ್ರಂಥರತ್ನ. ಶ್ರೀಮದ್ಭಾಗವತ, ಮಹಾಭಾರತ ಹಾಗೂ ರಾಮಾಯಣಾದಿ ಗ್ರಂಥಗಳಲ್ಲಿ ಎಲ್ಲೆಲ್ಲಿ ಸುಜೀವಿಗಳಿಗೆ ಸಂಶಯ ಉದ್ಭವಿಸು-ವುದೋ ಅಲ್ಲಲ್ಲಿ ಸರಿಯಾದ ಮಾರ್ಗ ತೋರಿಸಲು ರಚಿಸಿದ ದಿವ್ಯಗ್ರಂಥ, ಈಗ್ರಂಥಾವ ಲೋಕನವಿಲ್ಲದೇ ಭಾರತಾದಿಗಳನ್ನು ಓದಿದಾಗ ಸಂಶಯ ಜ್ಞಾನವೇ ಉಳಿದುಬಿಡವುದು "ನಾಸ್ತಿ ನಾರಾಯಣ ಸಮಂ ನ ಭೋತೋ ನ ಭವಿಷ್ಯತಿ । ಏತೇನ ಸತ್ಯವಾಕ್ಯೇನ ಸರ್ವಾರ್ಥಾನ್ ಸಾಧಯಾಮ್ಯಹಂ ॥ ಎಂದು ಸಾರಿದರು.

## 14 ಗೀತಾಭಾಷ್ಯ

ಶ್ರೀಮದಾಚಾರ್ಯರ ಪ್ರಥಮಗ್ರಂಥವಿದು. ಶ್ರೀವೇದವ್ಯಾಸರಿಂದ ಶ್ಲಾಗಿತರಾದರು, ಇದರಲ್ಲಿ ಜ್ಞಾನಪೂರ್ವಕವಾದ ಕರ್ಮಯೋಗವೇ ಮೋಕ್ಷಪ್ರದ ಎಂಬಂಶ-ವನ್ನು ಸ್ಪಷ್ಟಪಡಿಸಿದರು. ಇಡೀ ಗೀತಾ ಶಾಸ್ತ್ರ ಆಮೂಲಾಗ್ರವಾಗಿ ದ್ವೈತಪರವಾದುದೆಂಬುದನ್ನು ಶ್ರೀ ಆಚಾರ್ಯರು ಸ್ಪಷ್ಟಪಡಿಸಿದರು.

## 14 ಎ. ಗೀತಾತಾತ್ಪರ್ಯ

ಇದು ಶ್ರೀಮದಾಚಾರ್ಯರ ಗದ್ಯರೂಪವಾದ ಸಣ್ಣ ಗ್ರಂಥವಾದರೂ, ಗೀತಾ ಭಾಷ್ಯದಂತೆ ಬಹು ಅರ್ಥಗರ್ಭಿತವಾದುದು.

## 15. ಯಮಕ ಭಾರತ

ಶ್ರೀಮದಾಚಾರ್ಯರು ಶ್ರೀಕೃಷ್ಣನ[ಲೀ]ಕಥೆಯನ್ನು ಪಾಂಡವರ ಮಹಿಮೆಯನ್ನೂ ಈಗ್ರಂಥದಲ್ಲಿ 80 ಶ್ಲೋಕಗಳಿಂದ ಬಹು ಚಮತ್ಕಾರವಾಗಿ ತಿಳಿಸಿರುವುದು.

## 16 ರಿಂದ 19 ಸೂತ್ರಭಾಷ್ಯ, ಅಣುಭಾಷ್ಯ, ಅನುವ್ಯಾಖ್ಯಾನ ಹಾಗೂ ನ್ಯಾಯ ವಿವರಣೆ.

ಈಗ್ರಂಥಗಳಲ್ಲಿ ಶ್ರೀಮದಾಚಾರ್ಯರು ಶ್ರೀವೇದವ್ಯಾಸರಿಂದ ರಚಿತವಾದ 564 ಬ್ರಹ್ಮಸೂತ್ರಗಳಿಗೆ ಸಮಂಜಸ ವ್ಯಾಖ್ಯಾನ ತೋರಿಸುತ್ತಾ ದ್ವೈತಪತಾಕೆ ಹಾರಿಸಿದ ವರ್ಣನಾತೀತ ಗ್ರಂಥವಿದು. ಶ್ರೀಮದಾಚಾರ್ಯರ ಅಣುಭಾಷ್ಯಕ್ಕೆ ಶ್ರೀಜಯ-ತೀರ್ಥರು ಶ್ರೀಮನ್ನ್ಯಾಯಸುಧಾ ಗ್ರಂಥರಚಿಸಿರುವರು.

**ಪ್ರಸ್ತುತವಾದ ಗ್ರಂಥ ಇದಕ್ಕೆ ಸಂಬಂಧಿಸಿರುತ್ತದೆ.**

## 20. ಪ್ರಮಾಣ ಲಕ್ಷಣ

ಈಗ್ರಂಥದಲ್ಲಿ ಶ್ರೀಮದಾಚಾರ್ಯರು ತಿಳಿಸಿರುವುದೇನೆಂದರೆ, ಸಕಲರೂ ಮೋಕ್ಷ ಅಪೇಕ್ಷಿಸುವರು, ಆದರೆ ಅದು ಈಶ್ವರಜ್ಞಾನದಿಂದಲೇ ಲಭಿಸಬೇಕು. ಪ್ರಮಾಣಸ್ವರೂಪ ಲಕ್ಷಣ ಜ್ಞಾನವಿಲ್ಲದೇ ಪ್ರಮೇಯ ಜ್ಞಾನ ಆಗಲಾರದು, ಆದ್ದ-ರಿಂದ ಪ್ರಮಾಣಸ್ವರೂಪ ಲಕ್ಷಣವನ್ನು "ಯಥಾರ್ಥಂ ಪ್ರಮಾಣಂ" ಎಂದು ಉಲ್ಲೇ-ಖಿಸಿದರು. ಈಗ್ರಂಥ ಬಹು ಗಾಂಭೀರ್ಯವಾದುದು. ಇದನ್ನೇ ಶ್ರೀಜಯತೀರ್ಥರು ವಿದ್ಯಾರಣ್ಯರಿಗೆ ತೋರಿಸಿದ್ದು.

## 21. ಕಥಾಲಕ್ಷಣ

ಇದರಲ್ಲಿ ಶ್ರೀಮದಾಚಾರ್ಯರು ತತ್ವನಿರ್ಣಯದಲ್ಲಿ ಮೂರು ಬಗೆಯುಂಟು, ಅವುಗಳೇ ವಾದ, ಜಲ್ಪ, ವಿಕ್ರಂಡ ಎಂಬುದು. ತತ್ವನಿರ್ಣಯಕ್ಕಾಗಿ ಖ್ಯಾತಿಗೆ ಅಪೇಕ್ಷಿಸದೇ ಮಾಡುವವಾದಕ್ಕೆ "ವಾದ" ಎಂದೂ, ಕೇವಲ ಖ್ಯಾತಿಗಾಗಿ ಮಾಡುವವಾದಕ್ಕೆ ಜಲ್ಪ ಎಂದೂ, ತತ್ವ ವಿರುದ್ಧ ಆಡುವ ಮಾತಿಗೆ 'ವಿತ್ತಂಡ'ವಾದ ಈ ಮೂರು ವಿಧದ ವಾದ ಲಕ್ಷಣನ್ನು ತಿಳಿಸಿರುವರು.

## 22. ಮಾಯಾವಾದಿ ಖಂಡನಾ

ಇದು ಖಂಡನ ತ್ರಯದಲ್ಲಿ ಒಂದು, ಜೀವ ಪರಮಾತ್ಮರಿಗೆ ಐಖ್ಯಹೇಳುವ. ಜಗತ್ತಿಗೆ ಮಿಥ್ಯತ್ವಸಾರುವ, ಪರಮಾತ್ಮನಿಗೆ ಅಜ್ಞಾನ ಕೂಡಿಸುವ ಮಿಥ್ಯಾಮತಗಳನ್ನು ಖಂಡಿಸಿ ಹರಿಸರ್ವೋತ್ತಮತ್ವ, ವಾಯು ಜೀವೋತ್ತಮತ್ವ, ಜಗತ್ ಸತ್ಯತ್ವ, ಪಂಚ ಭೇಧ ತಾರತಮ್ಯಾದಿ ತಿಳಿಸಿ ವಿರಾಜಿಸಿದರು.

## 23. ಮಿಥ್ಯಾತ್ವಾನು ಮಾನ ಖಂಡನಾ

ಇದರಲ್ಲಿ ಶ್ರೀಮದಾಚಾರ್ಯರು ಶ್ರೀಹರಿಯಿಂದ ಸೃಷ್ಟಿಸಲ್ಪಟ್ಟ ಈಜಗತ್ತು ಪಾರಮಾರ್ಥಿಕ ಸತ್ಯವಾದುದು. ಇದರ ಕರ್ತೃವೂ ಗುಣಪೂರ್ಣನಾದ ಹರಿಯೆ ಎಂದು ವಾದಿಸಿ ಮಿಥ್ಯಾಮತವನ್ನು ಖಂಡಿಸಿದರು.

## 24. ಉಪಾಧಿಖಂಡನಾ

ಇದರಲ್ಲಿ ಶ್ರೀಮದಾಚಾರ್ಯರು ಪ್ರಮಾಣ ಸಿದ್ದವಾದ ಭೇಧವನ್ನು ನಿರಾಕರಿ-ಸಲು ಸಾಧ್ಯವೇ ಇಲ್ಲವೆಂದೂ, ಅದ್ವೈತಮದಲ್ಲಿ ಉಪಾದಿಯಾದ ಅಜ್ಞಾನವೇ ಕೂಡುವುದಿಲ್ಲವೆಂದೂ, ಆದ್ದರಿಂದ ಅದನ್ನು ಸ್ವೀಕರಿಸಲಾಗದೆಂದು ಸ್ಪಷ್ಟಪಡಿಸಿರು-ತ್ತಾರೆ.

## 25. ತತ್ವ ವಿವೇಕ

ಇದರಲ್ಲಿ ಶ್ರೀಮದಾಚಾರ್ಯರು

ಸ್ವತಂತ್ರಂ ಅಸ್ವತಂತ್ರಂ ಚ ಪ್ರಮೇಯಂ ದ್ವಿವಿಧಂ ಮತಂ ।
ಸ್ವತಂತ್ರೋ ಭಗವಾನ್ ವಿಷ್ಣುಃ ನಿರ್ದೋಷಾಖಿಲ ಸದ್ಗುಣಃ ॥

ಗುಣ, ಕ್ರಿಯಾ, ಜಾತಿ, ಶಕ್ತಿ, ಸಾದೃಶ್ಯ ಮೊದಲಾದ ಧರ್ಮಗಳು ವಸ್ತುವಿನ ಸ್ವರೂಪಗಳು, ಕಾರ್ಯ. ಕಾರಣ, ಗುಣ. ದ್ರವ್ಯ, ಕ್ರಿಯಾ. ಕ್ರಿಯಾವತ್ ಇತ್ಯಾದಿಗಳು ವಸ್ತುವಿನ ಭೇಧಾ ಭೇಧ ಸ್ವರೂಪಗಳು, ಈರೀತಿ ಸ್ವತಂತ್ರ, ಅಸ್ವತಂತ್ರ ಪ್ರಮೇಯ-ಗಳನ್ನು ನಿರೂಪಿಸಿ ಈ ಪರತಂತ್ರ ವಸ್ತುಗಳು ಸರ್ವತಂತ್ರ ಸ್ವತಂತ್ರನಾದ ಶ್ರೀವಿಷ್ಣುವಿನ ಅಧೀನ ಎಂದು ತಿಳಿಸಿವರು.

## 26. ತತ್ವ ಸಂಖ್ಯಾನ

ಇದರಲ್ಲಿ ಶ್ರೀಮದಾಚಾರ್ಯರು ತತ್ವವಿವೇಕದಂತೆ ಸ್ವತಂತ್ರ ಅಸ್ವತಂತ್ರ ತತ್ವ-ಗಳು ಪರಿಗಣಿಸಲ್ಪಟ್ಟಿವೆ ಎಂದಿದ್ದಾರೆ, ಸಮಸ್ತ ಜಗತ್ತೂ ಪರಮಾತ್ಮನ ಅಧೀನವೆಂದು ತಿಳಿದು ಉಪಾಸನೆ ಮಾಡಿದರೆ ಪರಮಾತ್ಮನ ಪ್ರಸಾದದಿಂದ ಮೋಕ್ಷ ಪ್ರಾಪ್ತಿ ಎಂದು ತಿಳಿಸಿದ್ದಾರೆ.

## 27. ತತ್ವೋದ್ಯೋತ

ಇದು ಶ್ರೀಮದಾಚಾರ್ಯರ ಬಹು ಪ್ರಮಾಣ ಜಟಿಲವಾದ ಚಿಕ್ಕ ಗ್ರಂಥ ಪ್ರಭಂಧರೂಪದಲ್ಲಿದೆ, ತಾನು ಅಲ್ಪಮತಿ ಎಂದು ತಿಳಿದವನೇ ಯೋಗ್ಯನೆಂದೂ, ಪಂಚ ಭೇಧ ತಾರತಮ್ಯಾದಿಗಳು ಸತ್ಯ ಹಾಗೂ ನಿತ್ಯವೆಂದೂ. ಮುಕ್ತಾವಸ್ಥೆಯಲ್ಲೂ ತಾರ-ತಮ್ಯ ಉಂಟೆಂದು ತಿಳಿಸಿರುತ್ತಾರೆ.

## 28. ವಿಷ್ಣು ತತ್ವ ನಿರ್ಣಯ

ಸದಾಗಮೈಕ ವಿಜ್ಞೇಯಂ ಸಮತೀತಕ್ಷರಾಕ್ಷರಂ ।
ನಾರಾಯಣಂ ಸದಾವಂದೇ ನಿರ್ದೋಷಾಶೇಷ ಸದ್ಗುಣಂ ॥

ಆಗಮವೇದ್ಯನಾಗಿ, ರಮಾ ಬ್ರಹ್ಮಾದಿವಂದ್ಯನಾದ, ಸರ್ವಗುಣ ಪರಿಪೂರ್ಣ-ನಾದ, ದೋಷಗಂಧ ವಿದೂರನಾದ, ಶ್ರೀಮನ್ನಾರಯಣನಿಗೆ ನಮಸ್ಕಾರ ಎಂದಿದ್ದಾರೆ ಇದರ ಒಂದೊಂದು ಪದಗಳಿಗೂ ಬಹು ವಿಸ್ತಾರಾರ್ಥವನ್ನು ಬಹು ಚಮತ್ಕಾರವಾಗಿ ತಿಳಿಸಿದ್ದಾರೆ.

## 29. ಕರ್ಮನಿರ್ಣಯ

ಕೇವಲ ಕರ್ಮದಿಂದ ಮೋಕ್ಷವಿಲ್ಲ. ಜ್ಞಾನರಾಹಿತ್ಯ ವಣಸತ್ಕರ್ಮಾ ಚರಣೆಗೂ

ಬೆಲೆಯಿಲ್ಲ. ಮಿಥ್ಯಾಜ್ಞಾನದಿಂದ ಕೂಡಿದ ಸತ್ಕರ್ಮವ್ಯರ್ಥ. ಸರಿಯಾದ ತತ್ವ-ಜ್ಞಾನದಿಂದ ಕೂಡಿದ ಸತ್ಕರ್ಮಾಚರಣೆ ಮೋಕ್ಷಕ್ಕೆ ಕಾರಣ ಎಂದು ಶ್ರೀಮದಾಚಾರ್ಯರು ತಿಳಿಸಿದ್ದಾರೆ.

## ತಾಂತ್ರೀಕ ಗ್ರಂಥಗಳು

### 30. ತಂತ್ರಸಾರ

ಶ್ರೀಮದಾಚಾರ್ಯರು ನಾಲ್ಕು ಅಧ್ಯಾಯದಿಂದ ಕೂಡಿದ ಈಗ್ರಂಥವನ್ನು ರಚಿಸಿರುತ್ತಾರೆ.

1ನೇಅಧ್ಯಾಯದಲ್ಲಿ :–ಅಷ್ಟಮಹಾಮಂತ್ರ-ಅದರ ಉತ್ಪತ್ತಿಕ್ರಮ, ಜಪ ಹಾಗೂ ದೇವತಾಪೂಜಾಕ್ರಮವನ್ನೂ

2ನೇಅಧ್ಯಾಯದಲ್ಲಿ :–ಕಳಶಪೂಜಾ. ಹವನ ಹೋಮಾದಿಗಳ ವಿಚಾರವನ್ನೂ

3ನೇ ಅಧ್ಯಾಯದಲ್ಲಿ :–ದೇವತಾ ಮಂದಿರ ರಚನೆ-ಪ್ರತಿಮಾಲಕ್ಷಣ-ದೇವತಾ ಪ್ರತಿಷ್ಟಾ ಸಂಪ್ರೋಕ್ಷಣಾ ವಿಚಾರ ಹಾಗೂ ಉತ್ಸವಾದಿಗಳ ಕ್ರಮಾ ವಿಚಾರವನ್ನೂ

4ನೇ ಅಧ್ಯಾಯದಲ್ಲಿ :-ಮಂತ್ರ, ಯಂತ್ರ, ಯಮನಿಯಮ, ಪ್ರಾಣಾಯಾಮ ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧಿ, ಜ್ಞಾನ, ಭಕ್ತಿ, ವೈರಾಗ್ಯ. ಮೋಕ್ಷಾದಿಗಳ ವಿಚಾರವನ್ನೂ ನಿರೂಪಿಸಿದ್ದಾರೆ.

ಈಎಲ್ಲಾ ಕಾರ್ಯಗಳಿಗೂ ಹರಿಸ್ಮರಣೆ ಮುಖ್ಯ ಎಂದಿದ್ದಾರೆ.

### 31. ಸದಾಚಾರಸ್ಮೃತಿ

ಆಚಾರಪರಮೋಧರ್ಮಃ ಎಂದಿರೋಣವರಿಂದ ಸದ್ದಾಚಾರ ಕ್ರಮವನ್ನು ತಿಳಿಸಿ ಅದನ್ನು ಹರಿಗೆ ಅರ್ಪಿಸಿದಾಗಲೇ ಪೂರ್ಣ ಫಲಪ್ರಾಪ್ತಿ ಎಂದಿದ್ದಾರೆ.

### 32. ಕೃಷ್ಣಾಮೃತಮಹಾರ್ಣವ

ಶ್ರೀಮದಾಚಾರ್ಯರು ಈಗ್ರಂಥದಲ್ಲಿ ವೈಷ್ಣವ ಧರ್ಮಗಳ ವಿಚಾರ, ವಿಷ್ಣು ಸರ್ವೋತ್ತಮತ್ವ, ನವವಿಧ ಭಕ್ತಿ ಕ್ರಮ, ಗೋಪೀಚಂದನ ಹಾಗೂ ಊರ್ಧ್ವಪುಂಡ್ರ ಧಾರಣಾ ಮಹಿಮಾ, ಹಾಗೂ ಕ್ರಮ. ನಿರ್ಮಾಲ್ಯ ತೀರ್ಥ ಅಂಗಾರದ ಮಹಿಮ, ಏಕಾದಶಿ ಆಚರಣೆ, ಹಾಗೂ ವಿಷ್ಣುವಿನ ಪ್ರೀತಿಕರವಾದ ಕ್ರಿಯಾದಿಗಳನ್ನು ನಿರೂಪಿಸಿ-ರುತ್ತಾರೆ.

### 33. ಯತಿ ಪ್ರಣವ ಕಲ್ಪ

ಇದರಲ್ಲಿ ಯತ್ಯಾಶ್ರಮ ಸ್ವೀಕರಿಸುವುದಕ್ಕೆ ಪೂರ್ವದಲ್ಲಿ "ವಿಷ್ಣುಸರ್ವೋತ್ತ-ಮತ್ವಂ ಚ ಸರ್ವದಾ ಪ್ರತಿಪಾದಯಾ" ಎಂಬ ಪ್ರಮಾಣ ವಚನಕ್ಕೆ ಸಮ್ಮತಿಸಿ ಧೀಕ್ಷಾ ಭದ್ದರಾಗಬೇಕೆಂಬ ಅಂಶವನ್ನು ನಿರೂಪಿಸಿರುತ್ತಾರೆ.

### 34. ಜಯಂತಿ ನಿರ್ಣಯ

ಇದರಲ್ಲಿ ಶ್ರೀಮದಾಚಾರ್ಯರು ಶ್ರೀಕೃಷ್ಣಜಯಂತಿ ನಿರ್ಣಯ ಹಾಗೂ ಶ್ರೀ ಏಕಾದಶಿ ನಿರ್ಣಯಾದಿಗಳ ವಿಚಾರ ತಿಳಿಸಿದ್ದಾರೆ.

### 35. ನಖಸ್ತುತಿ

ಶ್ರೀಮದಾಚಾರ್ಯರು ಇದರಲ್ಲಿ ಶ್ರೀಲಕ್ಷ್ಮೀನರಸಿಂಹ ದೇವರ ಪಾದ ನಖ ಮಹಾತ್ಮೆಯನ್ನು ಎರಡು ಶ್ಲೋಕಗಳಲ್ಲಿ ವಿವರಿಸಿದ್ದಾರೆ.

### 36. ದ್ವಾದಶಸ್ತೋತ್ರ

ಶಾಸ್ತ್ರ ಸಮ್ಮತವಾದ ಭಕ್ತಿಗೀತೆ ಇದು. ದಾಸಸಾಹಿತ್ಯಕ್ಕೆ ಇದೇ ಮೂಲ ಎಂದರೆ ತಪ್ಪಾಗಲಾರದು.

### 37. ಶ್ರೀಕೃಷ್ಣಗದ್ಯಾ

ಶ್ರೀಮದಾಚಾರ್ಯರು ಈಗ್ರಂಥದಲ್ಲಿ ಶ್ರೀಕೃಷ್ಣನನ್ನು ಬಹುವಾಗಿ ಕೊಂಡಾಡಿರುತ್ತಾರೆ.

**ಆಚಾರ್ಯರು ಭೋಧಿಸಿದ ಮುಖ್ಯ ಸಿದ್ಧಾಂತ**

1. ಶ್ರೀಹರಿಯೇ ಸರ್ವೋತ್ತಮನು.
2. ಶ್ರೀ ವಾಯುದೇವರು ಜೀವೋತ್ತಮರು.
3. ಜಗತ್ತು ಸತ್ಯವಾದುದು ಹಾಗೂ ನಿತ್ಯವಾದುದು.
4. ಪಂಚಭೇಧ ತಾರತಮ್ಯಾದಿಗಳು ಪಾರಮಾರ್ಥಿಕ ಸತ್ಯ ಹಾಗೂ ನಿತ್ಯ.
5. ಸಕಲಜೀವಿಗಳೂ ಶ್ರೀಹರಿಯ ಅನುಚರರು, ಹಾಗೂ ದಾಸರು.
6. ನಿತ್ಯದಲ್ಲೂ ಎಲ್ಲೆಡೆ ತಾರತಮ್ಯವುಂಟು.
7. ಮೋಕ್ಷದಲ್ಲೂ ತಾರತಮ್ಯವುಂಟು.
8. ಸ್ವರೂಪ ಸುಖಾನುಭವೇ ಮುಕ್ತಿ.
9. ನಿರ್ಮಲವಾದ ಭಕ್ತಿಯೇ ಮುಕ್ತಿಗೆ ಸಾಧನ.
10. ಪ್ರತ್ಯಕ್ಷ, ಅನುಮಾನ, ಆಗಮಗಳು ಸಾಧಕ ಪ್ರಮಾಣಗಳು ಶ್ರೀಹರಿ ಆಗಮ ವೇದ್ಯ ಎಂದು ಸಾರಿದವರು.

## ಪ್ರಾಚೀನ ಟೀಕಾಗ್ರಂಥಗಳು

ಅಪೌರುಷೇಯವೆನಿಸಿದ ವೇದಗಳಿಗೆ ಶ್ರೀವೇದವ್ಯಾಸರು ಬ್ರಹ್ಮಮೀಮಾಂಸ ಶಾಸ್ತ್ರ ರಚಿಸಿದರು. ಇದಕ್ಕೆ ಸರಿಯಾದ ಸರ್ವಮೂಲ ಗ್ರಂಥಗಳನ್ನು ಶ್ರೀಮದಾಚಾರ್ಯರು ರಚಿಸಿದರು. ಇದಕ್ಕೆ ಪ್ರಾಚೀನ ಟೀಕಾಕಾರರೆನಿಸಿದ

### ಶ್ರೀ ಪದ್ಮನಾಭತೀರ್ಥರು

1. ಮಾಯಾವಾದಖಂಡನಾ ಟೀಕಾ 2. ಉಪಾಧಿಖಂಡನ ಪ್ರಾಚೀನ ಟೀಕಾ 3. ಮಿಥ್ಯಾತ್ವಾನುಮಾನ ಖಂಡನ ಪ್ರಾಚೀನ ಟೀಕಾ 4. ಕಥಾಲಕ್ಷಣಾ ಪ್ರಾಚೀನ ಟೀಕಾ 5. ಗೀತಾ ಭಾಷ್ಯ ಪ್ರಾಚೀನ ಟೀಕಾ 6. ಗೀತಾತಾತ್ಪರ್ಯನಿರ್ಣಯ ಟೀಕಾ 7. ಸತ್ತರ್ಕ ದೀಪಾವಳಿ 8. ಸನ್ಯಾಯ ರತ್ನಾವಳಿ 9. ತತ್ವೋ-ದ್ಯೋತ ಪ್ರಾಚೀನ ಟೀಕಾ 10. ಪ್ರಮಾಣಲಕ್ಷಣ ಪ್ರಾಚೀನಟೀಕಾ 11, ವಿಷ್ಣು ತತ್ವನಿರ್ಣಯ ಪ್ರಾಚೀನ ಟೀಕಾ.

### ಶ್ರೀಹರಿಹರಿತೀರ್ಥರು

1. ಅನುವ್ಯಾಖ್ಯಾನ ಪ್ರಾಚೀನ ಟೀಕಾ
2. ಗೀತಾಭಾಷ್ಯ ಪ್ರಾಚೀನ ಟೀಕಾ
3. ಯಮಕಭಾರತ ಟೀಕಾ

### ಶ್ರೀ ತ್ರಿವಿಕ್ರಮ ಪಂಡಿತಾಚಾರ್ಯರು

1. ತತ್ವಪ್ರದೀಪ (ಸೂತ್ರಭಾಷ್ಯದ ಪ್ರಾಚೀನ ಟೀಕಾ-ಇದು)
2. ಆನಂದಮಾಲಾ

### ಶ್ರೀ ನಾರಾಯಣ ಪಂಡಿತಾಚಾರ್ಯರು

1. ನಯದ ಚಂದ್ರಿಕಾ ಪ್ರಾಚೀನ ಟೀಕಾ

### ಶ್ರೀ ಜಯತೀರ್ಥರು (ಟೀಕಾಚಾರ್ಯರು)

ಜಗತ್ಪ್ರಸಿದ್ಧರಾದ, ಟೀಕಾಚಾರ್ಯರೆಂದು ಬಿರುದು ಪಡೆದ ಶ್ರೀಜಯ-ತೀರ್ಥರು ಶ್ರೀಮದಾಚಾರ್ಯರ ಸರ್ವಮೂಲಕ್ಕೆ 18 ಟೀಕಾಗ್ರಂಥಗಳನ್ನೂ 3 ಸ್ವತಂತ್ರ ಗ್ರಂಥಗಳನ್ನೂ ರಚಿಸಿದ್ದಾರೆ. ಅವುಗಳೇ 1. ಗೀತಾಭಾಷ್ಯ 2. ಗೀತಾ ತಾತ್ಪರ್ಯ 3. ಸೂತ್ರಭಾಷ್ಯ 4. ಅನುವ್ಯಾಖ್ಯಾನ 5. ಋಗ್ಭಾಷ್ಯ 6. ಈಶಾ ವಾಷ್ಯ 7, ಷಟ್‌ಪ್ರಶ್ನ 8. ಉಪನಿಷದ್ಭಾಷ್ಯ ಪ್ರಮಾಣಲಕ್ಷಣಾದಿ ದಶ ಪ್ರಕರ ಣಗಳು ಮತ್ತು ನ್ಯಾಯ ವಿವರಣ ಇವೆಲ್ಲಾ ಟೀಕಾ ಗ್ರಂಥಗಳು, ಪ್ರಮಾಣಪದ್ಧತಿ, ವಾದಾವಳಿ ಮತ್ತು ಪದ್ಮಮಾಲಾ ಈ ಮೂರು ಸ್ವತಂತ್ರ ಗ್ರಂಥಗಳು.

ಶ್ರೀಮನ್ನ್ಯಾಯಸುಧಾ 24,000 ಗ್ರಂಥರತ್ನ

## – ಟಿಪ್ಪಣಿ ಗ್ರಂಥಗಳ ವಿವರ –

| ಸಂ. | ಟಿಪ್ಪಣಿ ಗ್ರಂಥಗಳು | ಟಿಪ್ಪಣಿಕಾರರು | ಗ್ರಂಥಪರಿಚಯ |
|---|---|---|---|
| 1. | ತಾತ್ಪರ್ಯ ಚಂದ್ರಿಕಾ | ಶ್ರೀ ವ್ಯಾಸರಾಜರು | ಬ್ರಹ್ಮಸೂತ್ರಭಾಷ್ಯ ಟಿಪ್ಪಣಿಯಾದ ತತ್ವ ಪ್ರಕಾಶಿಕೆಯ ಟಿಪ್ಪಣಿ ಗ್ರಂಥ (ಮೊದಲೆರಡು ಅಧ್ಯಾಯ ಮಾತ್ರಾ) |
| 2. | ತಾತ್ಪರ್ಯ ಚಂದ್ರಿಕಾ | ಶ್ರೀ ಶ್ರೀ ಶೇಷಚಂದ್ರಿಕಾಚಾರ್ಯರು | ಬ್ರಹ್ಮಸೂತ್ರಭಾಷ್ಯದ ಟಿಪ್ಪಣಿಯಾದ ತತ್ವಪ್ರಕಾಶಿಕೆಯ |
| 3. | ಭಾಷ್ಯ ದೀಪಿಕಾ | ಶ್ರೀ ಜಗನ್ನಾಥತೀರ್ಥರು | ಕೊನೆಯ ಎರಡು ಅಧ್ಯಾಯ ಮಾತ್ರಾ |
| 4. | ನ್ಯಾಯಾಮೃತ | ಶ್ರೀ ವ್ಯಾಸರಾಯರು | ಬ್ರಹ್ಮಸೂತ್ರಕ್ಕೆ ಸರಳಾರ್ಥ ಭೋದಕವಾದದ್ದು |
| 5. | ತರ್ಕ ತಾಂಡವ | " " | ನ್ಯಾಯವೈಶೇಷಿಕಮತ ಖಂಡನಾ ಗ್ರಂಥ |
| 6. | ಪರಿಮಳಾ | ಶ್ರೀ ರಾಘವೇಂದ್ರರು | ನ್ಯಾಯಸುಧಾ ಟಿಪ್ಪಣಿ ಗ್ರಂಥ |
| 7. | ವಾಕ್ಯಾರ್ಥ ಚಂದ್ರಿಕಾ | ಶ್ರೀ ವಿದ್ಯಾಧೀಶರು | " " |
| 8. | ಶೇಷವಾಕ್ಯಾರ್ಥ ಚಂದ್ರಿಕಾ | ಶ್ರೀ ಪಾಂಡುರಂಗಿಕೇಶವಾಚಾರ್ಯರು | " " |
| 9. | ದ್ವೈತದ್ಯುಮಣಿ | ಶ್ರೀ ಶ್ರೀನಾಥಾಚಾರ್ಯರು | ತರ್ಕೋದ್ಯೋತದ ಟಿಪ್ಪಣಿಗ್ರಂಥ |
| 10. | ಯುಕ್ತಿಮಲ್ಲಿಕಾ | ಶ್ರೀ ವಾದಿರಾಜರು | ತತ್ವಪ್ರಕಾಶಿಕಾ ಟಿಪ್ಪಣಿ ಗ್ರಂಥ 5375 ಶ್ಲೋಕಗಳಿಗೆ ಯುಕ್ತಿಯಿಂದ ಪರಮತ ಖಂಡನಾ ಮಾಡಲ್ಪಟ್ಟಿದೆ. |
| 11. | ನ್ಯಾಯಾಮೃತ ಮಕ್ಷಿತಾ | ಶ್ರೀ ಐಜಿ ಆಚಾರ್ಯರು | ನ್ಯಾಯಾಮೃತಕ್ಕೆ ವಿಸ್ತಾರ ಗ್ರಂಥ |
| 12. | ಪ್ರಮೇಯದೀಪಿಕಾವ್ಯಂಜನ | ಶ್ರೀ ಸುಮತೀಂದ್ರರು | ಪ್ರಮೇಯದೀಪಿಕಾ ವ್ಯಾಖ್ಯಾನ ಗ್ರಂಥ |
| 13. | ಭೃಹತೀಸಹಸ್ರ | ಶ್ರೀ ಶೇಷಚಂದ್ರಿಕಾಚಾರ್ಯರು | ಭೃಹತೀಸಹಸ್ರಕ್ಕೆ ವಿಸ್ತಾರ ಗ್ರಂಥ 352 ಪುಟದ್ದು |

| ಸಂ. | ಟಿಪ್ಪಣಿ ಗ್ರಂಥಗಳು | ಟಿಪ್ಪಣಿಕಾರರು | ಗ್ರಂಥಪರಿಚಯ |
|---|---|---|---|
| 14. | ತತ್ತ್ವಕಣಿಕಾ | " " | ತಂತ್ರಸಾರ ಗ್ರಂಥಕ್ಕೆ ಟಿಪ್ಪಣಿ 475 ಪುಟ |
| 15. | ಬೃಹದ್ಭಾಷ್ಯಟೀಕ | ಶ್ರೀ ರಘೋತ್ತಮರು | ಭಾಷ್ಯಕ್ಕೆ ವಿಸ್ತಾರ ಟಿಪ್ಪಣಿ ಗ್ರಂಥ "ಪರಬ್ರಹ್ಮ ಪ್ರಕಾಶಿಕಾ" ಗ್ರಂಥದ ಹೆಸರು. |
| 16. | ಋಗ್ಭಾಷ್ಯಟೀಕಾ ವಿವೃತ್ತಿ | ಶ್ರೀ ಕಂಬಾಲೂರು ರಾಮಚಂದ್ರತೀರ್ಥರು | ಭಾಷ್ಯಕ್ಕೆ ವಿಸ್ತಾರ ಟೀಕಾ |
| 17. | ಚಂದ್ರಿಕಾ ಪ್ರಕಾಶ | ಶ್ರೀ ರಾಘವೇಂದ್ರರು | ಚಂದ್ರಿಕಾ ವಿಸ್ತಾರ ಗ್ರಂಥ |
| 18. | ನ್ಯಾಯದೀಪ | " " | ತರ್ಕತಾಂಡವ ವಿಸ್ತಾರ ಗ್ರಂಥ |
| 19. | ಭಾಟ್ಟ ಸಂಗ್ರಹ | " " | ಜೈಮಿನ್ಯಾಚಾರ್ಯರ ಪೂರ್ವಮೀಮಾಂಸ ಸೂತ್ರಕ್ಕೆ ವ್ಯಾಖ್ಯಾನ ಗ್ರಂಥ |
| 20. | ಆಮೋದ | ಶ್ರೀವಿಜಯೀಂದ್ರರು | ನ್ಯಾಯಾಮೃತಕ್ಕೆ ವ್ಯಾಖ್ಯಾನ. |
| 21. | ನ್ಯಾಯಾಮೃತಸೌಗಂಧ | ಶ್ರೀವನಮಾಲಿ ಮಿಶ್ರರು | ನ್ಯಾಯಾಮೃತಕ್ಕೆ ವ್ಯಾಖ್ಯಾನ |
| 22. | ಕಂಠಕೋದ್ಧಾರ | ಶ್ರೀಪಾಂಡುರಂಗಿ ಆನಂದಭಟ್ಟರು | " " |
| 23. | ಭಾವ ಪ್ರಕಾಶಿಕಾ | ಶ್ರೀ ಸತ್ಯಪ್ರಜ್ಞರು | ನ್ಯಾಯದೀಪಿಕಾ ವ್ಯಾಖ್ಯಾನ |
| 24. | ನ್ಯಾಯಮಾಲಾ | ಶ್ರೀ ವಿಜಯೀಂದ್ರರು | ನ್ಯಾಯಾಮೃತಕ್ಕೆ ವ್ಯಾಖಾನ ಗ್ರಂಥ |
| 25. | ಸಂಬೋಧಿನೀ | ಶ್ರೀ ಆದ್ಯ ವರದಾಚಾರ್ಯರು | ತಾತ್ಪರ್ಯನಿರ್ಣಯ ಟೀಕಾ ಗ್ರಂಥ |
| 26. | ಕೋನೇರಿಯಾ | ಶ್ರೀ ಚಟ್ಟಕೋನೇರಿ ಭಟ್ಟರು | ಮಹಾಭಾರತ ತಾತ್ಪರ್ಯ ನಿರ್ಣಯ ಟೀಕಾ |

| ಸಂ. | ಟಿಪ್ಪಣಿಗ್ರಂಥಗಳು | ಟಿಪ್ಪಣಿಕಾರರು | ಗ್ರಂಥಪರಿಚಯ |
|---|---|---|---|
| 27. | ಅನಂತಭಟ್ಟೀಯ | ಶ್ರೀ ಅನಂತ ಭಟ್ಟರು | " " |
| 28. | ಮಧ್ವಮುಖಾಲಂಕಾರ | ಶ್ರೀ ವನಮಾಲಿ ಮಿಶ್ರರು | ಅಪ್ಪಯ್ಯ ದೀಕ್ಷಿತರ "ಮಧ್ವಮುಖಮರ್ಧನ" ಗ್ರಂಥಕ್ಕೆ ಖಂಡನಾ ಗ್ರಂಥ. |
| 29. | ನ್ಯಾಯಸುಧಾ ಕಂಠಕೋದ್ಧಾರ | ಶ್ರೀ ಜಾಲೀಹಾಳ್ ಶ್ರೀನಿವಾಸಾಚಾರ್ಯರು | ಅನಂತ ಕೃಷ್ಣಶಾಸ್ತ್ರಿಯ ಅದ್ಭುತ ತತ್ವ ಸುಧಾ ಗ್ರಂಥಕ್ಕೆ ಖಂಡನಾ ಗ್ರಂಥ. |
| 30. | ನ್ಯಾಯಸುಧಾ ಮಂಡನ | ಶ್ರೀ ಸತ್ಯಪ್ರಮೋದತೀರ್ಥರು | " " |
| 31. | ಭಾವರತ್ನಕೋಶ | ಶ್ರೀ ಸುಮತೀಂದ್ರರು | ತತ್ವಪ್ರಕಾಶಿಕಾ ಟಿಪ್ಪಣಿ |
| 32. | ಭಾಗವತ ವ್ಯಾಖ್ಯಾನ | ಶ್ರೀ ಸತ್ಯಾಭಿನವ ತೀರ್ಥರು | ಭಾಗವತ ವ್ಯಾಖ್ಯಾನ |
| 33. | ಐತರೇಯ ಮಂತ್ರಾರ್ಥ | ಶ್ರೀ ರಾಘವೇಂದ್ರರು | ಐತರೇಯ ಉಪನಿಷತ್ ಖಂಡಾರ್ಥ |
| 34. | ವಿಜಯಮಾಲಾ | ಶ್ರೀ ಸತ್ಯನಾಥ ತೀರ್ಥರು | " " |
| 35. | ಯೋಗದೀಪಿಕಾ | ಶ್ರೀ ನಾರಾಯಣ ಪಂಡಿತಾಚಾರ್ಯರು | ಮುಕ್ತಿ ಸಾಧನೋಪಾಯ ಗ್ರಂಥ |
| 36. | ಋಗ್ಭಾಷ್ಯಟೀಕಾ ಟಿಪ್ಪಣಿ | ಶ್ರೀ ಲಕ್ಷ್ಮೀನಾರಾಯಣಾಚಾರ್ಯರು | ಋಗ್ಭಾಷ್ಯಾರ್ಥ ವಿಸ್ತಾರ |
| 37. | ನ್ಯಾಯಸುಧಾರ್ಥಕುಲಿಶಂ | ಶ್ರೀ ವ್ಯಾಸತತ್ವಜ್ಞರು | |
| 38. | ಶ್ರೀವಿಷ್ಣುತತ್ವನಿರ್ಣಯ ವ್ಯಾಖ್ಯಾನ | ಶ್ರೀ ವಿಜಯೀಂದ್ರರು | ವಿಷ್ಣು ತತ್ವನಿರ್ಣಯ ಟಿಪ್ಪಣಿ |
| 39. | ವಾಗ್ವಜ್ರ | ಶ್ರೀ ಶ್ರೀಪಾದರಾಜರು | ನ್ಯಾಯ ಸುಧಾ ಟಿಪ್ಪಣಿ |

ಅಂತೆಯೇ ಶ್ರೀಯಾದವಾರ್ಯರು, ಇತ್ಯಾದಿ ಮಹಾನುಭಾವರುಗಳು ಶ್ರೀವಿಷ್ಣು-ತೀರ್ಥರೇ ಆದಿಯಾದ ಮಹಾಜ್ಞಾನಿ ಶ್ರೇಷ್ಠರುಗಳು ಜಗತ್ತಿನಲ್ಲಿ ಅವತರಿಸಿ ಖಠಿಣವಾದ ನೈಜತತ್ವಜ್ಞಾನದ ತಿರುಳನ್ನು ಅನುಗ್ರಹಿಸಿದರು. ಇಂತಹ ತಿರುಳಿನ ಸಾರ-ವನ್ನು ಕೇವಲ ಭಾಷಾಂತರ ರೂಪದಿಂದ ಹರಿದಾಸರುಗಳು ಪದ, ಪದ್ಯ, ಸುಳಾದಿ, ಉಗಾಭೋಗಗಳ ಮೂಲಕ ಆದುನೀಕ ಆಸ್ತಿಕರನ್ನೂ ಎಚ್ಚರಗೊಳಿಸಿ ಉದ್ಧರಿಸಿರು-ವುದನ್ನು ಬಹುವಾಗಿ ಕೃತಜ್ಞ ಪೂರ್ವಕ ಸ್ಮರಿಸಲೇ ಬೇಕಾಗಿದೆ,

**ಸಂಗ್ರಹ :–**

ಹೀಗೆ ಜೀವೋತ್ತಮರು ರಚಿಸಿದ ಬ್ರಹ್ಮಸೂತ್ರಭಾಷ್ಯದಲ್ಲಿ 223ಅಧಿಕರಣಗಳೂ 564 ಸೂತ್ರಗಳೂ ಇದ್ದು ಸಮನ್ವಯಾಧ್ಯಾಯ, ಅವಿರೋಧಾಧ್ಯಾಯ, ಸಾಧನಾಧ್ಯಾಯ ಹಾಗೂ ಫಲಾಧ್ಯಾಯ ಎಂತು 4 ಅಧ್ಯಾಯಗಳು ಇರುತ್ತಿವೆ. ಪ್ರಥಮಾಧ್ಯಾಯದ ಪ್ರಥಮ ಪಾದದಲ್ಲಿ ಅಧಿಕಾರಿಯಾದವನು ಮೋಕ್ಷ ಸಂಪಾದಿಸಲು ಬ್ರಹ್ಮ ಜಿಜ್ಞಾಸ ಮಾಡಬೇಕೆಂದೂ ಆಬ್ರಹ್ಮನು ಸರ್ವಗುಣ ಪರಿಪೂರ್ಣನಾದ, ಜಗಜನ್ಮಾದಿ ಕಾರಣನಾದ ಬ್ರಹ್ಮರುದ್ರಾದಿಗಳಿಗೂ ಹಿರಿಯನಾದ, ಸರ್ವಚೇಷ್ಟಕನಾದ, ಆಕಾಶ ಶಬ್ದವಾಚ್ಯನಾದ, ಪ್ರಾಣನಿಗೆ. ಪ್ರಾಣನಾದ, ಜ್ಯೋತಿಶಬ್ದವಾಚ್ಯನಾದ, ಗಾಯಿತ್ರಿ ಪ್ರತಿಪಾದ್ಯನಾದ. ವಿಷ್ಣುವೇ ಎಂದು ದೃಢಪಡಿಸಿದರು.

ಪ್ರಥಮಾಧ್ಯಾಯದ ದ್ವಿತೀಯಪಾದದಲ್ಲಿ ಬ್ರಹ್ಮಶಬ್ದವಾಚ್ಯನಾಗಿ, ಶೃಷ್ಟಿ ಸ್ಥಿತಿ ಲಯಾದಿ ಕರ್ತನಾದ, ಪ್ರಕೃತಿ ಹಾಗೂ ಅಗ್ನ್ಯಾದಿಗಳಿಗೆ ನಿಯಾಮಕನಾದ ಜಗತ್ತಿಗೆ ಕಾರಣನಾದ, ವೈಶ್ವಾನರಾದಿ ಸರ್ವಶಬ್ದ ವಾಚ್ಯನಾದವನು ಆ ವಿಷ್ಣುವೇ ಎಂದು ಸಾಧಿಸಿದರು.

ಪ್ರಥಮಾಧ್ಯಾಯ ತೃತೀಯಪಾದದಲ್ಲಿ ಸ್ವರ್ಗ, ಭೂಮಿ ಇತ್ಯಾದಿ ಎಲ್ಲದಕ್ಕೂ ಆಶ್ರಯದಾತನಾದ. ಭೂಮಶಬ್ದವಾಚ್ಯನೂ, ಅಣೋರಣೀಯನೂ, ಸರ್ವರ ಹೃದ್ಯಸ್ಥನೂ, ಜಿಜ್ಞಾಸ ವೇದನ್ಯೂ, ಸರ್ವರ ಪ್ರಚೋದಕನೂ, ಸರ್ವದೇವತೆಗಳ ಉಪಾಸ್ಯ ಮೂರುತಿಯೂ, ಸರ್ವಶಬ್ದವಾಚ್ಯನೂ, ಸುಷುಪ್ತ್ಯಾದಿಗಳಲ್ಲೂ ರಕ್ಷಕನೂ ಹಾಗೂ ಬ್ರಾಹ್ಮಣ ಶಬ್ದವಾಚ್ಯನೂ ಶ್ರೀಹರಿಯೇ ಎಂದ ಓತ್ತಿ ಹೇಳಿದರು ಶೂದ್ರಾದಿ ಅನಧಿಕಾರಿಗಳಿಗೆ ಉಪನಯಾದಿ ಸಂಸಾರವಿಲ್ಲದಕಾರಣ ತತ್ವೋಪದೇಶಕ್ಕೆ ಅವರು ಪಾತ್ರ-ರಲ್ಲ ಎಂದು ತಿಳಿಸಿದರು.

ಪ್ರಥಮಾಧ್ಯಾಯ ಚತುರ್ಥಪಾದದಲ್ಲಿ ಆನಂದ, ಆನಂದಮಯ. ಆಕಾಶ, ಇಂದ್ರ, ಜ್ಯೋತಿಷ್ಟೋಮ, ಎಲ್ಲಾ ಶಬ್ದವಾಚಕ ಶ್ರೀಹರಿಯೆ. ಅಂತೆಯೇ ಪ್ರಕೃ-ತ್ಯಾದಿಶಬ್ದ. ಸ್ತ್ರೀಲಿಂಗವಾಚಕಾದಿ ಎಲ್ಲವೂ ಅವನಲ್ಲೇ ಸಮನ್ವಯ ಎಂದಿದ್ದಾರೆ. **ಹೀಗೆ ಸಮನ್ವಯಾಧ್ಯಾಯದಲ್ಲಿ ಪರಮಾತ್ಮನೇ ಸರ್ವಶಬ್ದವಾಚ್ಯನೆಂದು ತಿಳಿಸಿದರು.**

ಇನ್ನು ದ್ವಿತೀಯಾಧ್ಯಾಯ ಪ್ರಥಮಪಾದದಲ್ಲಿ ವಿಶ್ವಕೃತ್ವಾದಿಗಳಿಗೆ ವಿಷ್ಣುವೇ ಮೂಲಕಾರಣನೆಂದೂ, ಅಭಿಮಾನಿದೇವತೆಗಳಲ್ಲಿ ಅವನೇ ಇದ್ದು ಕಾರ್ಯನಡೆಸುವ-ನೆಂದೂ ಅವನೇ ಜಗತ್ಕಾರಣ. ಮುಕ್ತಾಮುಕ್ತ ನಿಯಮಕ, ಸರ್ವೋತ್ತಮ, ಎಂದು ತಿಳಿಸುತ್ತಾ ಜೀವದಿಂದವನು ಪರಮಾತ್ಮನ ಹಾಗೂ ದಾಸ ಎಂದರು, ಪರಮಾತ್ಮನು ಅನಂತಗುಣ ಪರಿಪೂರ್ಣ ಹಾಗೂ ದೋಷ ದೂರ, ಇವನು ಸೃಷ್ಟ್ಯಾದಿಗಳನ್ನು ಕೇವಲ ಲೀಲೆಗೋಸುರ ಮಾಡುತ್ತಾನೆಂದೂ ವೈಷಮ್ಯನೈರ್ಘೃಣ್ಯಾದಿ ದೋಷ ದೂರ, ರಾದಹಹಿ ಅದ್ಭುತ ಚರಿತ ಅಂದರೂ ದ್ವಿತೀಯಾಧ್ಯಾಯದ ದ್ವಿತೀಯಪಾದದಲ್ಲಿ ನಿರೀಶ್ವರ ಸಾಂಖ್ಯಾಮತವನ್ನೂ ಸೇಶ್ವರ ಸಾಂಖ್ಯಾಮತವನ್ನೂ, ವೈಶೇಷಿಕರ ಮತವನ್ನೂ, ಭೌದ್ಧ ಪಾಶಾಂಡ ಮತವನ್ನೂ, ಮಾಧ್ಯಮಿಕ ಮತವನ್ನೂ ವೈಭಾಷಿಕಮತವನ್ನೂ ಸತ್ರಾಂತಿಕ ಮತವನ್ನು ಖಂಡಿಸಿದರು.

ದ್ವಿತೀಯಾಧ್ಯಾಯ ತೃತೀಯಪಾದದಲ್ಲಿ ಆಕಾಶ, ವಾಯು, ಅಗ್ನಿ ಎಲ್ಲದಕ್ಕೂ ಉತ್ಪತ್ತಿ ಉಂಟು ಎಲ್ಲರ ಲಯ ಕರ್ತ ವಿಷ್ಣುವೇ ಎಂದು ಸಾಧಿದರು. ಜೀವಿಯು ಪರಮಾತ್ಮನ ಅಧೀನ, ಅಣುವಾದ ಜೀವಿಗೆ ಚೇಷ್ಟಕ ಶ್ರೀಹರಿ ಎಂದರು ಪುಣ್ಯಪಾಪಾದಿ ಲೇಪನ ಜೀವಿಗೆ ಉಂಟು ಎಂದು ಸಾಧಿಸಿರು.

ದ್ವಿತೀಯಾಧ್ಯಾಯ ಚತುರ್ಥಪಾದದಲ್ಲಿ ಆಕಾಶ, ಇಂದ್ರಾದಿಗಳು. ಮನಸ್ಸು, ಹಾಗೂ ವಾಗಿಂದ್ರಿಯಾದಿಗಳು ಉತ್ಪತ್ತಿಯಾಗುವುವು. ಪ್ರಾಣನ ನಿರ್ಗಮವೇ ಮರಣ-ವಲ್ಲ: ಜಗತ್ತಿಗೆ ಮುಖ್ಯ ಚೇಷ್ಟಕ ಶ್ರೀಹರಿ ಪ್ರಾಣನಲ್ಲ, ಅವರು ಭಗವದ್ ಕಾರ್ಯ-ಸಾಧಕರು, ಸಕಲ ಇಂದ್ರಿಯಗಳ ಮುಖ್ಯನಿಯಾಮಕ ಶ್ರೀಹರಿಯೇ ಎಂದು ತಿಳಿಸುತ್ತಾ ಶರೀರದ ಉತ್ಪತ್ತಿ ವಿಚಾರ ತಿಳಿಸಿದರು.

**ಹೀಗೆ ಅವಿರೋದ ಅಧ್ಯಾಯವನ್ನು ನಿರೂಪಿಸಿದರು.**

ಇನ್ನು ತೃತೀಯಾಧ್ಯಾಯದ ಪ್ರಥಮ ಪಾದದಲ್ಲಿ ದೇಹನಾಶವಾದರೂ ಜೀವನಿಗೆ ನಾಶವಿಲ್ಲವೆಂದೂ ಜೀವನಿಗೆ ಅನೇಕ ದೇಹಗಳೆಂದೂ, ವೈರಾಗ್ಯಾದಿಗಳು ಆತ್ಮೋದ್ಧಾರಕ್ಕೆ ಅವಶ್ಯಕವೆಂದೂ, ಜೀವನಜೊತೆಗೆ ಇಂದ್ರಿಯಗಳು ಪಂಚಭೂತಗಳೂ ಹೋಗವುದರಿಂದ ಉತ್ತಮ ಸಾಧನೆ ಮಾಡಬೇಕು ಎಂದರು. ಕರ್ಮದಿಂದ ಸ್ವರ್ಗವೂ ಜ್ಞಾನದಿಂದ ಮೋಕ್ಷವೂ ಲಭಿಸುತ್ತಿದೆ. ಯಜ್ಞಯಾಗಾದಿ ಸಾತೀಕ ಕ್ರಮಾನುಷ್ಠಾನ ಅವಶ್ಯಕ, ಭಗವದ್ವೇಷಿಗೆ ಶತಸಿದ್ಧ, ಒಬ್ಬರು ಮತ್ತೊಬ್ಬರಲ್ಲ ಐಖ್ಯರಾಗುವುದಿಲ್ಲ ಜೀವಿಯಾದವನಿಗೆ ತಂದೆ ತಾಯಿಗಳಿಂದ ಉತ್ಪತ್ತಿ ಬಗೆ ಮತ್ತು ಮಹಾತ್ಮರ ಉತ್ಪತ್ತಿ ಕ್ರಮವೇ ಬೇರೆ ಎಂದು ನರೂಪಿಸಿದರು.

ತೃತೀಯಾಧ್ಯಾಯದ ದ್ವಿತೀಯಪಾದದಲ್ಲಿ ಸ್ವಪ್ನ, ಜಾಗ್ರತೆ, ಸುಷುಪ್ತಿ, ಇವುಗಳಿಗೆ ಹರಿಯೇ ಕಾರಣ ಎಂದರು. ಜೀವನು ಪರಮಾತ್ಮನಿಗೆ ಪ್ರತಿಬಿಂಬಸ್ಥಾನಧವ

ಎಂದರು. ಜೀವನು ಪರಮಾತ್ಮನಿಗೆ ಪ್ರತಿಬಿಂಬಸ್ಥಾನದವ ಎಂದರು. ಜೀವನ ಸಾಧನೆಗೆ ಅನುಗುಣವಾಗಿ ಫಲ ಪ್ರಾಪ್ತಿ, ಶ್ರೀಹರಿ ಜಗತ್‌ಪಾಲಕನಾದಾಗ್ಯೂ ಅಗೋಚರನಾದವ ಆದರೆ ಭಕ್ತಿಗೆ ಮಾತ್ರಾವಲಿಯುವವನು. ಬ್ರಹ್ಮಾದಿಗಳ ಆನಂದದಲ್ಲಿ ತಾರತಮ್ಯ ಉಂಟು ಅಂತೆಯೇ ಫಲದಲ್ಲಿಯೂ ಎಂದು ತಿಳಿಸಿದರು.

ತೃತೀಯಾಧ್ಯಾಯದ ತೃತೀಯ ಪಾದದಲ್ಲಿ ಭಗವದುಪಾಸನೆಗೆ ಅಧಿಕಾರಭೇಧದಿಂದ ತಾರಮ್ಯವಿದೆ ಎಂದರು. ಬ್ರಹ್ಮದೇವರು, ಮುಮುಕ್ಷುಗಳು ಇವರ ಔಪಾಸನೆಯ ವೈಲಕ್ಷಣದ್ದೇ ಔಪಾಸನೆಯಲ್ಲಿ ತಾರತಮ್ಯ ಇರೋಣದರಿಂದ ಮೋಕ್ಷದಲ್ಲೂ ತಾರತಮ್ಯವುಂಟು ಎಂದರು, ಮುಕ್ತರಿಗೆ ವಿಧಿನಿಷೇಧ ಇಲ್ಲದಿದ್ದರೂ ಅವರು ಸತ್ಕರ್ಮಾನುಸಕ್ತರಾಗಿಯೇ ಇರುತ್ತಾರೆ ಎಂದರು, ಅಧಿಕಾರಿಗಳಲ್ಲಿ ರಮಾದೇವಿನಂತರ ಮುಖ್ಯಪ್ರಾಣನೇಶ್ರೇಷ್ಟ. ಲಕ್ಷ್ಮೀದೇವಿಯು ನಿತ್ಯಮುಕ್ತಳು. ಅಕ್ಷರಳು, ಅವಳರೂಪ ಪ್ರಾಕೃತಭಾವದ್ದು ಜ್ಞಾನವೇ ಮೋಕ್ಷಕ್ಕೆ ಕಾರಣ. ಅದಕ್ಕಾಗಿ ಗುರುವಿನ ಅವಶ್ಯಕತೆ ಮುಖ್ಯ, ಬ್ರಹ್ಮದರ್ಶನದಲ್ಲಿಯೂ ತಾರತಮ್ಯವಿದೆ. ಸ್ವಯೋಗ್ಯ ಔಪಾಸನೆ ಮುಖ್ಯ ಹಾಗೂ ಯುಕ್ತ ಇತ್ಯಾದಿರೀತ್ಯ ಈ ಪಾದದಲ್ಲಿ ಬಹುವಿಚಾರವನ್ನು ಉಲ್ಲೇಖಿಸಿರುತ್ತಾರೆ.

ತೃತೀಯಾಧ್ಯಾಯದ ಚತುರ್ಥಪಾದದಲ್ಲಿ ಪುರುಷಾರ್ಥಸಾಧನೆಗೆ ಜ್ಞಾನಸಾಧನವೇ ಮುಖ್ಯವೆಂದೂ ಇದಕ್ಕೆ ಅಧಿಕಾರಭೇದವಿದೆ ಎಂದೂ, ಸದಸತ್ಕೃವೃತ್ತಿಯಲ್ಲಿ ಜ್ಞಾನಿಗಳಿಗೆ ಪ್ರವೃತ್ತಿ ಇಲ್ಲವೆಂದೂ, ಅಧಿಕಾರಿಗಳಿಗೆ ಮಾತ್ರಾ ಬ್ರಹ್ಮಜ್ಞಾನವೆಂದೂ, ಗೃಹಸ್ಥನಿಗಿಂತ ಯತಿ ಶ್ರೇಷ್ಟ, ಆತನಿಗಿಂತ ದೇವತೆಗಳು ಶ್ರೇಷ್ಠರು ಎಂದೂ, ಅಣುವಾದ ಜೀವಿಗೆ ಶ್ರೀಹರಿ ಚೇಷ್ಟಕನೆಂದೂ, ಜೀವಿಗೆ ಅಧೀನ ಕರ್ತೃತ್ವವುಂಟೆಂದೂ ತಿಳಿಸಿದರು ಆಯೋಗ್ಯರಿಗೆ ಉಪದೇಶಕೂಡದು. ಉಪದೇಶ ಯೋಗ್ಯತೆ ಅನುಸರಿಸಬೇಕು ಅಪರೋಕ್ಷಜ್ಞಾನಿಗೆ ಕರ್ಮಕ್ಷಯಾನಂತರವೇ ಮುಕ್ತಿ ಎಂದೂ ಸಹ ತಿಳಿಸಿದರು.

**ಹೀಗೆ ಸಾಧನಾಧ್ಯಾಯವನ್ನು ನಿರೂಪಿಸಿದರು**

ಇನ್ನು ಚತುರ್ಥಾಧ್ಯಾಯ ಪ್ರಥಮಪಾದದಲ್ಲಿ ಜ್ಞಾನಕ್ಕಾಗಿ ಶ್ರವಣಾದಿ ಆವೃತ್ತಿ ಮಾಡಬೇಕೆಂದರು, ವಿಷ್ಣುವೇ ನನ್ನ ಸ್ವಾಮಿ ಎನಬೇಕು. ನಾಮದಲ್ಲಿ ಹರಿ ಇದ್ದಾನೆಂದು ಅವನು ಗುಣಪೂರ್ಣನೆಂದು ಔಪಾಸನೆ ಮಾಡಬೇಕು. ಔಪಾಸನೆಗೆ ವಿಹಿತಾಸನ ಮುಖ್ಯ ಎಂದರು. ಮುಕ್ತಿ ಪರ್ಯಂತ ಧ್ಯಾನಮಾಡಬೇಕು. ಬ್ರಹ್ಮದರ್ಶನಾನಂತರ ಕರ್ಮಲೇಪವಿಲ್ಲ ಇತ್ಯಾದಿ ವಿಚಾರ ತಿಳಿಸಿದರು.

ಚತುರ್ಥಾಧ್ಯಾಯ ದ್ವಿತೀಯಪಾದದಲ್ಲಿ ವಾಕ, ಮಾನ, ಇವುಗಳ ಅಭಿಮಾನಿಗಳ ಲಯವನ್ನು ತಿಳಿಸಿದರೂ ಗರುಡ, ಶೇಷ, ವಾರುಣೀ ಸೌಪರ್ಣ ಹಾಗೂ ಎಲ್ಲಾ ಜ್ಞಾನಿಗಳ ಉತ್ಕ್ರಾಂತಿ ವಿಚಾರ ತಿಳಿಸಿದರು.

ಚತುರ್ಥಾಧ್ಯಾಯ ತೃತೀಯಪಾದದಲ್ಲಿ ಅರ್ಚನಾದಿ ಮಾರ್ಗವಿಚಾರ, ವಾಯುದೇವರ ಸ್ಥಾನ ಮಾನ ತಿಳಿಸಿದರು.

ಚತುರ್ಥಾಧ್ಯಾಯದ ಚತುರ್ಥಪಾದದಲ್ಲಿ ಜ್ಞಾನಿಯು ಮುಕ್ತಾತೆ ಸಾಯುಜ್ಯ ಮುಕ್ತಿ ಸ್ವರೂಪ, ಮುಕ್ತರ ಯೋಗ್ಯತೆ ಅವರಿಗೆ ಪುನರ್‌ಜನ್ಮವಿಲ್ಲ ಎಂದು ತಿಳಿಸಿದರು.

**ಅರ್ಪಣ**

ಗ್ರಂಥದ ಮುನ್ನುಡಿಯಲ್ಲಿ ಮೊದಲೇ ನಿವೇದಿಸಿಕೊಂಡಿರುವಂತೆ ಈಅಣುಗ್ರಂಥ ಬ್ರಹ್ಮಸೂತ್ರವನ್ನು ಅಭ್ಯಾಸಮಾಡುವ ಹಂಬಲದವರಿಗಲ್ಲ. ಹರಿದಾಸಸಾಹಿತ್ಯವು ಏನೋ ಕನ್ನಡ ಪದ, ಪದ, ಸುಳಾದಿ. ಉಳಭೋಗಗಳಲ್ಲ. ಆದಂ ಮನರಂಜನೆಗಾಗಿ ಅಲ್ಲ. ಹರಿದಾಸ ಸಾಹಿತ್ಯವು ಕೇವಲ ಶಾಸ್ತ್ರಗ್ರಂಥದ ಒಂದು ಭಾಷಾಂತರ ರೂಪ ಎಂಬ ಅಂಶವನ್ನು ಆಸ್ತಿಕರ ಮನದಲ್ಲಿ ನೆರೆಗೊಳಿಸಲು ಶ್ರೀ ಮಧ್ವಾಚಾರ್ಯರ ಬಹ್ಮ ಸೂತ್ರ ಭಾಷ್ಯಾಧಾರದ ಮೇರೆ 564 ಬ್ರಹ್ಮಸೂತ್ರಗಳ ಅಭಿಪ್ರಾಯವನ್ನು ಯಾವ ರೀತಿ ಹರಿದಾಸರುಗಳು ತಮ್ಮ ಪ್ರಸಾದಿತ ವಾಣಿಯಿಂದ ತಿಳಿಸಿರುತ್ತಾರೆಂಬುದನ್ನು ತೊ ತೋರಿಸುವುದೇ ನನ್ನ ಈ ಗ್ರಂಥ ರಚನೆಯ ಮೂಲ ಉದ್ದೇಶ. ಪ್ರತಿ ಅಧಿಕರಣದಲೂ ನೇರವಾದ ಸಮಂಜಸವಾ ಕೃತಿಗಳು ದೊರೆಯದಿರಬಹುದು. ಆದರೆ ದಾಸ ಸಾಹಿತ್ಯ ಬ್ರಹ್ಮಸೂತ್ರಭಾಷ್ಯವನ್ನು ಅವಲಂಬಿಸಿದೆಯೆಂಬ ಅಭಿಪ್ರಾಯ ಎಲ್ಲರ ಹೃದಯದಲ್ಲಿ ಬಂದರೆ ನನ್ನ ಶ್ರಮ ಸಾರ್ಥಕವಾಗುವುದು. ಪಂಡಿತಮಾನಿಗಳು ದಯಮಾಡಿ ಮಾ- ತ್ಸರ್ಯ ರಹಿತರಾಗಿ ಹಂಸಕ್ಷೀರ ನ್ಯಾಯದಂತೆ ಈ ಗ್ರಂಥಕ್ಕೆ ಮನ್ನಣೆ ಕೊಡಬೇಕೆಂದು ವಿನಯಪೂರ್ವಕವಾಗಿ ಪ್ರಾರ್ಥಿಸಿಕೊಳ್ಳುತೆನೆ. ಪಾಂಡಿತ್ಯ ಪ್ರದರ್ಶನಕ್ಕಾಗಲಿ ಮೂಲ ಗ್ರಂಥದ ಪಾವಿತ್ರತೆಗೆಚ್ಯುತಿ ತರುವ ಉದ್ದೇಶ ಖಂಡಿತವಾಗಿಯು ನನ್ನಗಿಲ್ಲ. ಅವುಗಳಲ್ಲಿ ಪರಮಭಕ್ತಿ ಶ್ರದ್ಧಾ ಆದರ ನನಗಿದೆ.

ಈ ನನ್ನ ಗ್ರಂಥಾಧ್ಯಯನದಿಂದ ಸಕಲ ಸಜ್ಜನರು ಶ್ರೀಬ್ರಹ್ಮ ಮಿಮಾಂಸಶಾಸ್ತ್ರ ಸರ್ವಮೂಲ ಗ್ರಂಥಾಧ್ಯನಕ್ಕೆ ಮನಸ್ಸು ಬಂದು ನಂತರ ಅಲ್ಲಿಯ ವಾಕ್ಯಗಳಿಗೂ ಹರಿ- ದಾಸ ಸಾಹಿತ್ಯಕ್ಕೂ ಸಮನ್ವಯ ಮಾಡುವ ಬುದ್ಧಿ ಬರಲೆಂದು ಆಶಿಸುತ್ತೇನೆ.

"ಸುಧಾ ಓದಿ ಪದಾನೋಡು" ಎಂಬುದು ಸಾರ್ಥಕವಾಗಲಿ

ಇದರಿಂದ ಶ್ರೀಹರಿ, ವಾಯು, ಗುರುಗಳು ಸುಪ್ರೀತರಾಗಿ ಅನುಗ್ರಹಿಸಲಿ.


ಇತಿ ಶ್ರೀ ಹರಿದಾಸರ ಪಾದ ರಜನಾದ

**ಚಿಂಚೋಳಿ ಪ್ರಹ್ಲಾದಾಚಾರ್ಯ**

(ಹರಿದಾಸಸಾಹಿತ್ಯಧುರೀಣ-ದಾಸಸಾಹಿತ್ಯ ರತ್ನ)

ನಂ. 784 "ಮಧ್ವನಿಲಯ" 13ನೇ ಮೈನ್

3ನೇಬ್ಲಾಕ್, ರಾಜಾಜಿನಗರ, ಬೆಂಗಳೂರು-10.



**ಚಿಂಚೋಳೀ ವಂಶ ಜಾತಾನಾಂ**
**ಆಚಾರ್ಯಾಣಾಂ ತಾಮಹಂ ಸದಾ ।**
**ಸ್ಮರಾಮಿ ಚರಣದ್ವಂದ್ವಂ**
**ಸಮಸ್ತಾಭೀಷ್ಟ ಸಿದ್ಧಯೇ ॥**

ಎಂದು ಶ್ರೀ ಪಲಿಮೋಳಿ ವಂಶದ ಪಂಡಿತರಿಂದ ಪ್ರಶಂಸಿಸಲ್ಪಟ್ಟ ಉತ್ತಮ ಚಿಂಚೋಳಿ ವಂಶಸ್ಥರಾದ ಶ್ರೀ ರಾಘವೇಂದ್ರರ ಕೃಪಾಪಾತ್ರರಾದ ಶ್ರೀ ಮಹಿದಾಸಾಚಾರ್ಯರ ಮೊಮ್ಮಕ್ಕಳೂ, ಸಾಧು ಸಂತರಂತೆ ಜೀವನ ನಡೆಸಿದ ಶ್ರೀ ರಾಘವೇಂದ್ರ ಬಾಳಾಚಾರ್ಯರ ಸುಪುತ್ರರೂ ಆದ ಶ್ರೀ ಚಿಂಚೋಳಿ ಪ್ರಹ್ಲಾದಾಚಾರ್ಯರು ವಂಶ ಪಾರಂಪರ್ಯವಾಗಿ ಬಂದಿರುವ ಪ್ರವಚನಾದಿ ಕಾರ್ಯಗಳನ್ನು ನಡೆಸಿಕೊಂಡು ಬರುತ್ತಿರುವುದೂ ಅಲ್ಲದೇ ದಾಸಸಾಹಿತ್ಯ ಪ್ರಚಾರಕರೂ ಆಗಿದ್ದು, ಶ್ರೀವ್ಯಾಸರಾಜ ಮಠಾಧೀಶರಿಂದ "ದಾಸಸಾಹಿತ್ಯ ರತ್ನ" ಎಂಬ ಬಿರುದು ಪಡೆದಿದ್ದಾರೆ. ಇವರು ಬರೆದ 250 ಪುಟಗಳ "ಶ್ರೀ ವ್ಯಾಸರಾಜರು" ಗ್ರಂಥ ಬಿಡುಗಡೆ ಮಾಡುತ್ತಾ ಪರಮ ಪೂಜ್ಯ ಶ್ರೀ ಉತ್ತರಾದಿ ಮಠಾಧೀಶರು ಇವರಿಗೆ "ಹರಿದಾಸ ಸಾಹಿತ್ಯ ಧುರೀಣ" ಎಂಬಬಿರುದನ್ನು ಅನುಗ್ರಹಿಸಿದ್ದಾರೆ. ಶ್ರೀ ಕುಂದಾಪುರ ವ್ಯಾಸರಾಜಮಠದ ಹಿರಿಯ ಮಠಾಧೀಶರ ಆಜ್ಞೆಯಂತೆ ಸಂಸ್ಥಾನದ ಮೂಲದೇವರುಗಳನ್ನು ಹೆಗಲಮೇಲೆ ಹೊತ್ತುಕೊಂಡು ಪಾದಯಾತ್ರೆ ಮೂಲಕ ಶ್ರೀ ಬದರಿಕಾಶ್ರಮಕ್ಕೆ ಹೋಗಿ ಅಲ್ಲಿ ಶ್ರೀ ಬ್ರಹ್ಮಣ್ಯತೀರ್ಥರ ಆರಾಧನೆಯಲ್ಲಿ ಪಾಲ್ಗೊಂಡಿದ್ದಾರೆ. ಈವರೆಗೆ 188 ಸಲ ಮಂತ್ರಾಲಯ ಯಾತ್ರೆ ಮಾಡಿರುತ್ತಾರೆ. ಸಂಗೀತ, ಸಾಹಿತ್ಯ ಕ್ಷೇತ್ರದಲ್ಲೂ ಅಪಾರ ಪಾಂಡಿತ್ಯಗಳಿರುವ ಪ್ರಹ್ಲಾದಾಚಾರ್ಯರು ತಮ್ಮ ಪಿತಾಮಹರಾದ ಶ್ರೀ ಮಹಿದಾಸಾಚಾರ್ಯರನ್ನು ಕುರಿತು ಒಂದು ಸಣ್ಣ ಗ್ರಂಥವನ್ನು ಬರೆಯುತ್ತಾರೆ. ಸಾಲದುದಕ್ಕೆ ಧಾರ್ಮಿಕ, ತಾತ್ವಿಕ ಮಾಸಪತ್ರಿಕೆಗಳಾದ ತತ್ವವಾದ, ತತ್ವಚಂದ್ರಿಕಾ, ಪಾರಿಜಾತಕುಸುಮ, ಸಪ್ತಗಿರಿ, ದಾಸವಾಣಿ ಮೊದಲಾದ ನಿಯತಕಾಲಿಕಗಳಲ್ಲದೇ ಪ್ರಮುಖ ದಿನ ಪತ್ರಿಕೆಗಳಲ್ಲೂ ಧಾರ್ಮಿಕ ಲೇಖನಗಳನ್ನು ಬರೆಯುತ್ತಾರೆ. ಸುಮಾರು 350 ಲೇಖನಗಳನ್ನು ಈವರೆಗೆ ಬರೆದಿದ್ದಾರೆ. ಕಾಲುನಡಿಗೆಯಲ್ಲಿ ಬದರಿಕಾಶ್ರಮಕ್ಕೆ ಹೋಗಿದ್ದು. ಕರ್ನಾಟಕ, ಆಂಧ್ರಪ್ರದೇಶ, ತಮಿಳುನಾಡು, ಮಹಾರಾಷ್ಟ್ರ ದಿಗಳಲ್ಲಿ ದಾಸಸಾಹಿತ್ಯ ಪ್ರಚಾರ ಮಾಡಿರುತ್ತಾರೆ. ಹರಿದಾಸಸಾಹಿತ್ಯವು ಶಾಸ್ತ್ರಗ್ರಂಥದ ಕೇವಲ ಭಾಷಾಂತರವಾಗಿ ಪಾವಿತ್ರತೆ ಹೊಂದಿದೆ ಎಂಬುದನ್ನು ತಿಳಿಸಲೋಸುಗ ಶ್ರೀ ಬ್ರಹ್ಮಸೂತ್ರಗಳಿಗೆ ದಾಸಸಾಹಿತ್ಯವನ್ನು ಜೋಡಿಸುವ ಕಾರ್ಯವನ್ನು ಪೂಜ್ಯ ಶ್ರೀವಿಜ್ಞಾನನಿಧಿತೀರ್ಥರ ಉದಾರತೆಯಿಂದ ನೆರವೇರಿಸಿ ಅವರ ಅನುಗ್ರಹಪಾತ್ರರಾಗಿ ಶ್ರೀ ಹರಿವಾಯು ಗುರುಗಳ ಕಾರುಣ್ಯ ಪಾತ್ರರಾಗಿದ್ದಾರೆ.